# ಡಾ. ಬಸವರಾಜ ಕಟ್ಟೀಮನಿ

ಡಾ. ವೀರೇಶ ಬಡಿಗೇರ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಡಾ. ಬಸವರಾಜ ಕಟ್ಟೀಮನಿ

ಡಾ. ವೀರೇಶ ಬಡಿಗೇರ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

Dr. Basavaraja Kattimani: By Dr. Veeresh Badiger, Published by Dr. Karigowda Beechanahalli, Director, Prasaranga, Kannada University, Hampi, Vidyaranya, Kamalapura 583 221, PP: VIII + ೪೮
Rs. 12/-

First Impression: 1996

ನಮ್ಮವರು ಪುಸ್ತಕಮಾಲೆ ೧೫



ಮುಖಪುಟ ವಿನ್ಯಾಸ: ಕೆ. ಮಕಾಳಿ

ಪ್ರಕಾಶಕರು
ಡಾ. ಕರೀಗೌಡ ಬೀಚನಹಳ್ಳಿ
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧

ಬೆಲೆ: ಹನ್ನೆರಡು ರೂಪಾಯಿಗಳು

ಛಾಯಾಕ್ಷರ ಜೋಡಣೆ: ವರ್ಷಿಣಿ ಗ್ರಾಫಿಕ್ಸ್, ಬೆಂಗಳೂರು - ೪೦

ಮುದ್ರಕರು
ಸ್ನೇಹಾ ಪ್ರಿಂಟರ್ಸ್
೨೨, ೨ನೇ ಮೈನ್, ಅತ್ತಿಗುಪ್ಪೆ
ವಿಜಯನಗರ ೨ನೇ ಹಂತ
ಬೆಂಗಳೂರು - ೫೬೦ ೦೪೦

## ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ- ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಮಹತ್ವದ ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಯಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

ಚಂದ್ರಶೇಖರ ಕಂಬಾರ
ಕುಲಪತಿಗಳು

# ಪರಿವಿಡಿ

## ಜೀವನ

ಪ್ರಗತಿಶೀಲ ಲೇಖಕರಲ್ಲಿ ಬಸವರಾಜ ಕಟ್ಟೀಮನಿಯವರದು ಮೊದಲ್ಮ ಹೆಸರು. ಆಧುನಿಕ ಕನ್ನಡ ಸಾಹಿತ್ಯ ಲೋಕದಲ್ಲಿ ವಿಭಿನ್ನ ಮತ್ತು ವಿಶಿಷ್ಟವಾದ ಬರಹ ಪರಂಪರೆಯನ್ನು ಹುಟ್ಟುಹಾಕಿದ ಕಟ್ಟೀಮನಿಯವರನ್ನು ನಮ್ಮ ಸಾರಸ್ವತ ಲೋಕವು ತನ್ನೊಳಗುಮಾಡಿಕೊಳ್ಳದೆ ಬಿಟ್ಟುಬಿಟ್ಟಿದೆ. ಅಪಾರ ಜೀವನಾನುಭವದ ವಿವೇಕ ಮತ್ತು ವೈರುಧ್ಯಗಳ ಹಿನ್ನೆಲೆಯಲ್ಲಿ ಇವರ ಕೃತಿಗಳು ಬಂದಿದ್ದು ಅವುಗಳ ಬಗೆಗಿನ ಚರ್ಚೆ ವಿಮರ್ಶೆ ಪೂರ್ಣ ಪ್ರಮಾಣದಲ್ಲಿ ನಡೆದೇಯಿಲ್ಲ. 'ಪ್ರಗತಿ ತತ್ವದ' ಉದಾತ್ತ ಗುರಿಯ ಮೇಲೆ ನಿರ್ದಿಷ್ಟ, ನೇರ, ಸುಧಾರಣಪರ ನೆಲೆಯಲ್ಲಿ ಸಾಹಿತ್ಯ ಕೃಷಿ ಮಾಡಿದ ಕಟ್ಟೀಮನಿಯವರ ಬಗ್ಗೆ ಮೌಲಿಕವಾದ ಚಿಂತನೆ ತೀರ ಅವಶ್ಯಕ.

ಕಟ್ಟೀಮನಿಯವರ ಜೀವನ ಕಥೆಯನ್ನು ಅವಲೋಕಿಸಿದಾಗ ಇವರ ಬಗ್ಗೆ ಅಸಡ್ಡೆಯಿದ್ದ ಜನರೇ ಹೆಚ್ಚಾಗಿರುವುದು ಕಾಣುತ್ತದೆ. ಸಾಹಿತ್ಯ ವಲಯದಲ್ಲಂತೂ ಇದು ಇನ್ನೂ ಹೊಡೆದು ಕಾಣುವಂಥದ್ದು. ಈ ಎಲ್ಲ ಮೂಲಭೂತವಾದಿಗಳನ್ನು, ಅವರಿಂದ ಬರುವ ಪ್ರತಿರೋಧಗಳನ್ನು ಎದುರಿಸುತ್ತ, ತನಗನಿಸಿದ್ದನ್ನು ನಿರ್ಭಿಡೆಯಿಂದ ನಿಸ್ಸಂಕೋಚವಾಗಿ ಹೇಳುತ್ತ ಮೇಲೇರಿದವರು. ಈ ರೀತಿಯ ಆಲೋಚನೆ ಮತ್ತು ಬರವಣಿಗೆಗೆ ಕಟ್ಟೀಮನಿಯವರು ಬೆಳೆದ ಪರಿಸರ, ರಾಜಕೀಯ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಬಹುಮುಖ್ಯ ಕಾರಣಗಳಾಗಿವೆ.

ತಂದೆ ಅಪ್ಪಣ್ಣ ಪೋಲೀಸ್‌ಪೇದೆ. ತಾಯಿ ಬಾಳವ್ವ ಶ್ರಮಜೀವಿ. ತುಂಬ ಸ್ವಾಭಿಮಾನಿಗಳು. ನೆಲದ ಗಡಸುಳ್ಳವರು. ಇವರ ಮಗನಾಗಿ ೧೯೧೯ನೇ ಅಕ್ಟೋಬರ್ ೫ ರಂದು ಗೋಕಾಕ್‌ನಲ್ಲಿ ಬಸವರಾಜ ಹುಟ್ಟಿದರು. ಬೆಳೆದದ್ದು ತಾಯಿಯ ಊರಾದ ಮಲಾಮರಡಿಯಲ್ಲಿ. ಭೂಹೀನ ರೈತ ಕುಟುಂಬದಲ್ಲಿ ಹುಟ್ಟಿದ ತಂದೆ-ತಾಯಿ ನಿರಕ್ಷರಿಗಳಾಗಿದ್ದರು. ರೈತ ಮಕ್ಕಳು ಅಂದು ಅಕ್ಷರ ಕಲಿಯುವದೆಂದರೆ ಅದು ತುಂಬ ಅಪರೂಪ. ಹಾಗಿದ್ದೂ ಕ್ರೂರ ಬಡತನದಲ್ಲಿಯೂ ಮಕ್ಕಳು ಓದಬೇಕೆಂಬುದು ತಂದೆ-ತಾಯಿಗಳ ಹಂಬಲ. ಅವ್ವ ಬಾಳವ್ವನ ಮಾತಿನಲ್ಲೇ ಹೇಳುವುದಾದರೆ "ನಾನಂತೂ

ಸಾಲೀ ಕಲೀಲಿಲ್ಲ. ನಿಮ್ಮಪ್ಪನೂ ಕಲೀಲಿಲ್ಲ. ನನ್ನ ಮಕ್ಕಳು ನೀವಾದರೂ ಕಲೀರೆಪಾ, ಕಲತು ಶ್ಯಾಣ್ಯಾರಾಗ್ರಿ" ಮಕ್ಕಳ ಶಿಕ್ಷಣದ ಬಗೆಗಿನ ಅವರ ಅಪೂರ್ವ ಕಾಳಜಿ ಇಲ್ಲಿ ಪ್ರಕಟವಾಗಿದೆ.

ತಂದೆಗೆ ಸಿಗುವ ಹನ್ನೆರಡು ರೂಪಾಯಿಗಳ ಮಾಸಿಕ ವೇತನದಲ್ಲೇ ಸಂಸಾರ ಸಾಗಬೇಕು. ಅವ್ವ ಕೂಡ ಅಕ್ಕ ಪಕ್ಕದವರ ಜೋಳ, ಅಕ್ಕಿ, ಬೀಸಿ, ಕುಟ್ಟಿ, ಹಾಲು ಮಾರಿ ನಾಲ್ಕೆಂಟಾಣೆಗಳಿಸಿ ಗಂಡನೊಂದಿಗೆ ಸಂಸಾರಕ್ಕಾಗಿ ಸಹಕರಿಸುವ ಜೀವವಾಗಿದ್ದಳು ಹೊರತು ಕುಳಿತು ಕೆಡಿಸುವವಳಾಗಿರಲಿಲ್ಲ.

ಬಸವರಾಜರಿಗೆ ಒಬ್ಬ ಅಣ್ಣ ಇಬ್ಬರು ತಮ್ಮಂದಿರು. ಅಣ್ಣ ಯಾವಾಗಲೂ ಶ್ರೀಮಂತ ಮಕ್ಕಳೊಂದಿಗಿನ ಸ್ನೇಹಮಯಿ. ಬಸವರಾಜ ಮಾತ್ರ ಇದಕ್ಕೆ ತದ್ವಿರುದ್ಧ. ಬಡವ ಮತ್ತು ಶ್ರೀಮಂತರ ಲೋಕವೇ ಬೇರೆ ಎಂಬ ಸತ್ಯದ ಅರಿವು ಚಿಕ್ಕಂದಿನಿಂದಲೇ ಅವರಿಗಾಗಿತ್ತು. ಬಡವರ ಹುಡುಗರೊಂದಿಗಿನ ಸ್ನೇಹವೂ ಅಷ್ಟಕ್ಕಷ್ಟೆ. ಶಾಲೆ ಬಿಟ್ಟ ತಕ್ಷಣ ಊಟ ಮುಗಿಸಿ ಎಮ್ಮೆ ಮೇಯಿಸಲು ಹೋಗುವುದು. ಕೋಟೆ ಎದುರಿನ ಕೆರೆಯಲ್ಲಿ ಮೈ ತೊಳೆದು ಮನೆಗೆ ತಂದು ಕಟ್ಟಿ ಮೇವು ಹಾಕುವುದು. ರಾತ್ರಿ ಚಿಮಣಿ ದೀಪದಲ್ಲಿ ಓದು. ಇದು ಬಾಲ್ಯದ ದಿನಚರಿ. ಅವ್ವನ ಅಂತಃಕರಣ, ಅಪ್ಪನ 'ಲಾಠಿ' ಈ ಸ್ಥಿತಿಗೆ ಕಾರಣವಾಗಿತ್ತು.

ತಾಯಿ ಹೇಳುತ್ತಿದ್ದ ಜಾನಪದ ಕಥೆ, ಹಾಡುಗಳು ಸಹಜವಾಗಿ ಬಸವರಾಜರನ್ನು ಕಥೆ ಕವಿತೆಗಳತ್ತ ಸೆಳೆದವು. ಓದಿನಗೀಳು ಹೆಚ್ಚಿಸಿದವು. ಗಳಗನಾಥರ 'ಪ್ರಬುದ್ಧ ಪದ್ಮನಯನಾ' ವಾಸುದೇವಾಚಾರ್ಯರ 'ಇಂದಿರಾ' ಶ್ರೀನಿವಾಸರ 'ಸುಬ್ಬಣ್ಣ' ಆನಂದ, ಕುವೆಂಪು ಅವರ ಕಥೆಗಳ ಶ್ರದ್ಧಾಪೂರ್ವಕ ಓದು ಅವರ ಲೇಖಕ ಜೀವನಕ್ಕೆ ರೂಪುಕೊಟ್ಟವು. ಈ ರೂಪಿಕೆಯಲ್ಲಿ ಸಹಾಯಕವಾದ ಇನ್ನೊಂದು ಪ್ರಮುಖ ಜೀವ ತಾಯಿ. ಕಟ್ಟೀಮನಿಯವರೇ ಹೇಳುವಂತೆ, "ನಾನು ತಾಯಿಯ ಆಸೆಯಂತೆ ದೊಡ್ಡ ಲೇಖಕನಾದೆನೋ ಇಲ್ಲೊ ಗೊತ್ತಿಲ್ಲ, ಲೇಖಕನಾಗಿದ್ದದ್ದು ಮಾತ್ರ ನಿಜ." ಕಟ್ಟೀಮನಿಯವರ ಅಭ್ಯಾಸವೆಲ್ಲ ಅಲೆದಾಟದಲ್ಲಿಯೇ ಆಯಿತು. ಅಲೆದಾಟವೆಲ್ಲವೂ ಇವರ ಅಭ್ಯಾಸವಾಯಿತು. ಅದು ಅನುಭವದಲ್ಲಿ ಆಕೃತಿ ಪಡೆಯಿತು. ಸ್ವತಃ ಕಟ್ಟೀಮನಿಯವರೆ ತಮ್ಮ ಬದುಕು ಬರಹದಲ್ಲಿ ಹೇಳಿಕೊಳ್ಳುವಂತೆ "ಐವತ್ತು ವರ್ಷ ಆಯುಷ್ಯದಲ್ಲಿ ನಲವತ್ತರಷ್ಟು ಬರಿ ಹೋರಾಟದಲ್ಲಿಯೇ ಸವೆದದ್ದು, ಜೀವನವಿಡೀ ಅಲೆದಾಟ ತಪ್ಪಲಿಲ್ಲ. ಬದುಕಲು ಹೋರಾಟ, ಬೆಳೆಯಲು ಹೋರಾಟ, ತಿಳಿಯಲು ಹೋರಾಟ, ಎಲ್ಲವೂ ಹೋರಾಟಮಯ."

ಕಾರಣ ತಂದೆ ಸರ್ಕಾರಿ ನೌಕರ, ವರ್ಗವಾದ ಕಡೆ ಇವರು ಹೋಗಬೇಕು. ಕೊನೆಗೆ ಬೆಳಗಾವಿಯಲ್ಲಿ ಮುಲ್ಕೀ ಪರೀಕ್ಷೆ ಪಾಸು ಮಾಡಿದರು. ಅಲ್ಲಿಯೇ ಪ್ರಸಿದ್ಧ

ಕನ್ನಡ ಪಂಡಿತರಾದ ಪ್ರ.ಗೋ. ಕುಲಕರ್ಣಿಯವರಿಂದ ವಾಚನ- ಲೇಖನಕ್ಕೆ ಮಾರ್ಗದರ್ಶನ ಸಿಕ್ಕಿತು. ತಂದೆಯ ಅನಿರೀಕ್ಷಿತ ಮರಣದ ನಂತರ ತಾಯಿಯೇ ಮನೆ ನಡೆಸಬೇಕಾಯಿತು. ಹೀಗಾಗಿ ಶೆಟ್ಟಿಗಲ್ಲಿಯಲ್ಲೊಂದು ಮನೆ ಮಾಡಿ ಜಿ.ಎ. ಹೈಸ್ಕೂಲಿನಲ್ಲಿ ಓದು ಮುಂದುವರಿಸಿದರು. ಶಾಲೆಯಿಂದ ಹೊರಡುವ ಕೈಬರಹ ಪತ್ರಿಕೆ ಕಟ್ಟೀಮನಿ ಸಾಹಿತ್ಯ ಕೃಷಿಗೆ ಒಳ್ಳೆಯ ಭೂಮಿಕೆಯಾಯಿತು.

ಈ ಸಂದರ್ಭದಲ್ಲಿ ಕಟ್ಟೀಮನಿಯವರ ಮನೆಯಲ್ಲಿ ಪರಿಸ್ಥಿತಿ ತುಂಬ ದಾರುಣವಿತ್ತು. ಒಪ್ಪತ್ತು ಊಟ, ಹರಿದ ಅಂಗಿ, ಚಡ್ಡಿ, ಚೊಣ್ಣಕ್ಕೆ ಮೈಯೆಲ್ಲಾ ತೇಪೆ, ಲೇಖನಕಲೆಯಲ್ಲಿ ಆಸ್ಥೆ, ಗಣಿತದಲ್ಲಿನ ನಿರಾಸಕ್ತಿ, ಈ ಎಲ್ಲಾ ಸಂಗತಿಗಳು ಅವರ ಮ್ಯಾಟ್ರಿಕ್ ಪರೀಕ್ಷೆಯನ್ನು ನುಂಗಿ ಹಾಕಿದವು. ಪದವೀಧರನಾಗಿ ನೌಕರಿ ಹಿಡಿಯುವುದಕ್ಕಿಂತ ಸಾಹಿತ್ಯ ಕೃಷಿಯ ಹಂಬಲ ಜಾಸ್ತಿಯಾಯಿತು. ಅಂದು ಬೆಳಗಾಂವಿಯಿಂದ ಪ್ರಕಟವಾಗುತ್ತಿದ್ದ 'ಸಂಯುಕ್ತ ಕರ್ನಾಟಕ'ದಲ್ಲಿ ಸೇರಿಕೊಂಡರು. ಇನ್ನೂ ಹದಿನೇಳರ ವಯಸ್ಸು. ಆರು ತಿಂಗಳ ಕಾಲ ಇಲ್ಲಿ ಕೆಲಸಮಾಡಿದರು. ಇಲ್ಲಿನ ಸಂಪಾದಕರಾದ ಮೊಹರೆ ಹನುಮಂತರಾಯರು, ದಿವಾಕರ ರಂಗರಾಯರ ವಾತ್ಸಲ್ಯಮಯಿ ಪ್ರಭಾವಿ ವ್ಯಕ್ತಿತ್ವ ಕಟ್ಟೀಮನಿಯವರನ್ನು ನಿಷ್ಠಾವಂತ ಕಾಂಗ್ರೆಸ್ಸಿಗರನ್ನಾಗಿಸಿತು. ಮುಂದೆ ಹುಬ್ಬಳ್ಳಿಯ 'ತರುಣ ಕರ್ನಾಟಕ'ದಲ್ಲಿ ಉಪಸಂಪಾದಕನಾಗಿ ದುಡಿದರು. ಇಲ್ಲಿನ ಸಂಪಾದಕರ ನಡವಳಿಕೆಗೆ ಬೇಸತ್ತು ಧಾರವಾಡದ 'ಸಮಾಜ' ಪತ್ರಿಕೆಯಲ್ಲಿ ಕೆಲಸಕ್ಕೆ ನಿಂತರು. ಅಲ್ಲಿಂದ 'ಸ್ವತಂತ್ರ ಕರ್ನಾಟಕ' ವಾರ ಪತ್ರಿಕೆಯಲ್ಲಿ ಕೆಲಸ ಮಾಡಿದರು. ಮತ್ತೇ ಮಲಾಮರಡಿಗೆ ತಿರುಗಿ ಹುಬ್ಬಳ್ಳಿಯ 'ಲೋಕ ಮಾತಾ', ಗದುಗಿನ ಕರ್ನಾಟಕ ಬಂಧು' ವಾರ ಪತ್ರಿಕೆಯಲ್ಲಿ ಬಿಡುವಿಲ್ಲದೆ ಕೆಲಸಮಾಡಿದರು. ಮತ್ತೆ ಬೆಂಗಳೂರಿಗೆ ಪಯಣ. 'ವಾಣಿ' ಮಾಸ ಪತ್ರಿಕೆಯ ಪ್ರಾರಂಭ ಮಾಡಿದರು. ಅದರ ಮೊದಲ ಸಂಚಿಕೆ ಹೊರಬರುವುದರಲ್ಲಿಯೇ ಅಲ್ಲಿಂದ ಹೊರಬಂದರು. ೧೯೪೨ರಲ್ಲಿ ಧಾರವಾಡದ 'ವಿಶಾಲಕರ್ನಾಟಕ' ದಿನಪತ್ರಿಕೆಯಲ್ಲಿ ಕೆಲಸ ನಿರ್ವಹಿಸಿದರು. ಸ್ವತಂತ್ರ ಚಳುವಳಿಯಲ್ಲಿ ಸೇರಿ ಒಂಭತ್ತು ತಿಂಗಳು ಸೆರೆವಾಸ. ಬಿಡುಗಡೆಯಾದ ಮೇಲೆ ಎಸ್. ನಂಜಪ್ಪನವರೊಂದಿಗೆ ಬೆಂಗಳೂರಿನಲ್ಲಿ 'ಉಷಾ' ಪತ್ರಿಕೆಯ ಕಾರ್ಯಾರಂಭ. ಎರಡು ವರ್ಷ ಕಟ್ಟೀಮನಿಯವರ ಸಂಪಾದಕತ್ವದಲ್ಲಿ ನಡೆದ ಪತ್ರಿಕೆ ಅದ್ಭುತ ಸಾಧನೆ ಮಾಡಿತು. ಕಿರಿಯ ಬರಹಗಾರರಲ್ಲಿ ಅದಮ್ಯ ಆಸಕ್ತಿ ಹೊಂದಿದ ಕಟ್ಟೀಮನಿ ಅನೇಕ ತರುಣ ಕವಿ ಕಥೆಗಾರರನ್ನು ಈ ಸಂದರ್ಭದಲ್ಲಿ ಪ್ರೋತ್ಸಾಹಿಸಿ ಬೆಳೆಸಿದರು. ಅಲ್ಲಿಂದ ಮತ್ತೆ 'ಕರ್ನಾಟಕ ಬಂಧು' ನಂತರ ಬೆಂಗಳೂರಿನಲ್ಲಿ 'ಸ್ವತಂತ್ರ' ಮಾಸ ಪತ್ರಿಕೆಯಲ್ಲಿ ಕೆಲಸ. ಹೀಗೆ ಕರ್ನಾಟಕದಲ್ಲೆಲ್ಲ ಕಟ್ಟೀಮನಿಯವರ 'ಕಾರವಾನ್' ತಿರುಗಿ ಬಂತು.

ಹನ್ನೆರಡು ಹದಿಮೂರು ವರ್ಷ ಪತ್ರಕರ್ತರಾಗಿ ದುಡಿದ ಕಟ್ಟೀಮನಿಯವರಿಗೆ ಕೆಲಸಗಾರರ ಮಾಲೀಕರ, ಬಂಡವಾಳಗಾರರ, ಕೂಲಿಕಾರರ; ವಿವಿಧ ಸ್ವಭಾವದ ಕವಿ

ಲೇಖಕರ; ಸಮಾಜ- ಸರ್ಕಾರಗಳ ವೈವಿಧ್ಯವೂ ವೈರುಧ್ಯಮಯವೂ ಆದ ಅನುಭವ ಲೋಕಗಳನ್ನು ದರ್ಶಿಸಿ ಮಲಾಮರಡಿಗೆ ಬಂದು ನೆಲೆನಿಂತರು. ಯಾವ ಜಂಜಾಟಗಳೂ ಅವರ ಕ್ರಿಯಾತ್ಮಕ ಮನಸ್ಸನ್ನು ಅದುಮಲಿಲ್ಲ. ಬದಲಾಗಿ ಇನ್ನೂ ಹೆಚ್ಚಿನ ಸಾಧನೆ ಮಾಡಬೇಕೆಂಬ ಅವರ ಹಂಬಲವನ್ನು ಹರಿತಗೊಳಿಸಿದವು.

ಇಷ್ಟೊತ್ತಿಗಾಗಲೇ ಕಟ್ಟೀಮನಿಯವರಿಗೆ ಮದುವೆಯಾಗಿತ್ತು. ಅದೂ ಅಲ್ಲದೆ 'ಕಾರವಾನ್' 'ಗುಲಾಬಿ ಹೂ' 'ಆಗಸ್ಟ್ ಒಂಬತ್ತು' ಎಂಬ ಕಥಾ ಸಂಕಲನಗಳು ಪ್ರಕಟವಾಗಿದ್ದವು. ಈ ಕಥೆಗಳಲ್ಲಿ ತಾವು ಕಂಡುಂಡ ಪಡಿಪಾಟಲುಗಳನ್ನು, ಕಂಡ ಸತ್ಯಗಳನ್ನು, ಸ್ವಾತಂತ್ರ್ಯ ಚಳುವಳಿಯ ವಾಸ್ತವಗಳನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸಿದ್ದರು.

ಕಟ್ಟೀಮನಿಯವರ ಬರಹಗಳಿಗೆ ಹೆಚ್ಚು ಪ್ರಶಸ್ತವಾದದ್ದು ಅವರ ಊರಿನ ಪರಿಸರವೇ. ಸುತ್ತಲೂ ಗುಡ್ಡ ಬೆಟ್ಟ ಹಳ್ಳ-ತೋಟಗಳಿಂದ ತುಂಬಿದ ಮಲಾಮರಡಿಯ ಜೀವಂತಿಕೆಯಲ್ಲಿ ಬೆಳಗಿನ ನಾಲ್ಕು ಗಂಟೆಗಳ ಕಾಲ ಲೇಖನ, ಸಾಯಂಕಾಲ ವಾಚನ ಅಥವಾ ರೈತ ವೃತ್ತಿ ಮಾಡಿಕೊಳ್ಳುತ್ತಿದ್ದರು. ಇಲ್ಲಿಯೇ ಜ್ವಾಲಾಮುಖಿಯ ಮೇಲೆ, ಮೋಹದ ಬಲೆಯಲ್ಲಿ, ಖಾನಾವಳಿಯ ನೀಲಾ, ಮಣ್ಣು ಮತ್ತು ಹೆಣ್ಣು ಮೊದಲಾದ ಪ್ರಸಿದ್ಧ ಕಾದಂಬರಿಗಳನ್ನು ರಚಿಸಿದರು.

ತಮ್ಮ ಕಥೆ, ಕಾದಂಬರಿಗಳಲ್ಲಿ ಹಳ್ಳಿಯ ಜೀವನದ ಒಳಿತು ಕೆಡಕು ಮೋಜು-ಮಜಲು, ಪ್ರೇಮ-ಕಾಮ, ಮುಗ್ಧತೆ-ದ್ವೇಷಗಳಂತಹ ಹಲವಾರು ಅಂಶಗಳನ್ನು ಸೆರೆಹಿಡಿದಿದ್ದಾರೆ. ಸ್ವತಃ ಹಳ್ಳಿಗಳಲ್ಲಿನ ಅಲೆದಾಟದಿಂದ ರೈತ ಜನರ ಕಷ್ಟ ಸುಖಗಳ ನಿಕಟ ಪರಿಚಯವನ್ನು ಹೊಂದಿದ್ದರು. ಗ್ರಾಮಸುಧಾರಣೆಗಳಂತಹ ಸ್ವಾನುಭವಗಳ ವಾಸ್ತವತೆಯ ಗಾಢ ಚಿತ್ರಣಗಳು, ಗ್ರಾಮೀಣ ಪಾಳೆಗಾರಿಕೆ, ವ್ಯವಸ್ಥೆಯ ಕ್ರೌರ್ಯಗಳನ್ನು ಅವರ ಕೃತಿಗಳು ಯಥಾವತ್ತಾಗಿ ಕಟ್ಟಿಕೊಡುತ್ತವೆ.

ಕಟ್ಟೀಮನಿಯವರ ಸೃಷ್ಟಿಕ್ರಿಯೆ ಸ್ಥಾವರ ಸ್ವರೂಪದ್ದಾಗಿರಲಿಲ್ಲ. ಪ್ರಗತಿ ತತ್ವದ ಮನೋಧರ್ಮದ ಅವರು ಬರವಣಿಗೆಯಲ್ಲಿ, ಬದುಕಿನಲ್ಲಿ ಹೊಸ ಹೊಸ ಆವಿಷ್ಕಾರಗಳಿಗೆ ಆಕೃತಿಗಳಿಗೆ ಹಂಬಲಿಸುವವರಾಗಿದ್ದರು. ಒಂದೇ ವಸ್ತುವನ್ನು ಹಿಡಿದು ಹಿಗ್ಗಾ-ಮುಗ್ಗಾ ಎಳೆದಾಡುವ ಪ್ರವೃತ್ತಿಯವರಲ್ಲ. ಅವರೇ ಹೇಳುವಂತೆ "ಬರೆಯುವವನಾದರೂ ಎಷ್ಟೆಂದು ಬರದಾನು? ಒಂದೇ ವಸ್ತುವಿನ ಬಗ್ಗೆ ಮತ್ತೆ ಮತ್ತೆ ಬರೆಯುವದೆಂದರೆ ನನಗಾಗದು. ಪ್ರತಿಯೊಂದು ಕಾದಂಬರಿಯಲ್ಲೂ ಹೊಸ ವಸ್ತು ಇದ್ದರೇನೇ ನನಗೆ ಸಮಾಧಾನ. ಬರೆಯುವದಕ್ಕೂ ಉತ್ಸಾಹ.......... ಕಥೆ ಕಾದಂಬರಿಗಳಲ್ಲಂತೂ ಪ್ರತಿಸಲವೂ ಹೊಸದೇನಾದರೂ ಇರಲೇಬೇಕು, ಹಾಡಿದ್ದೇ ಹಾಡೋ ಕಿಸಬಾಯಿ ದಾಸಾ ಎನ್ನುವುದು ಕಥಾ ಸಾಹಿತ್ಯದಲ್ಲಿ ನಡೆಯುವಂತಿಲ್ಲ" (ಕಾದಂಬರಿಕಾರನ ಕಥೆ, ೧೯೮೧ ಪು.೫೭೦)

ಒಳ್ಳೆಯ ವಸ್ತು ಕಂಡರೆ ಸಾಕು, ಅದನ್ನು ಕೃತಿಗಿಳಿಸುವ ಪ್ರತಿಭೆ ಅವರದು. ಹಾಗೆ ಒಳ್ಳೆ ಜನ ಕಂಡರೆ ಆತ್ಮೀಯತೆ ಬಯಸುವ ಸ್ವಭಾವದವರೂ ಆಗಿದ್ದರು. ಸಂಕುಚಿತತೆ, ಸಣ್ಣತನ, ಜಾತಿ ಮತ್ಸರ, ಆಷಾಢಭೂತಿತನ ಕಂಡರೆ ಅವರಿಗಾಗುತ್ತಿರಲಿಲ್ಲ.

ಪ್ರಗತಿಶೀಲತೆಯ ಹೆಸರಿನಲ್ಲಿ ಪ್ರತಿಗಾಮಿತನಕ್ಕಿಳಿಸುವ ಜನರನ್ನು ಕಂಡು ಕಟ್ಟೀಮನಿಯವರು ಕಿಡಿಕಿಡಿಯಾದರು. ಎಲ್ಲರೂ ಒಪ್ಪಿಕೊಂಡ ವಿಚಾರಧಾರೆಯನ್ನು ಇವರು ಒಪ್ಪಿಕೊಳ್ಳಲಿಲ್ಲ. ಪ್ರಗತಿಶೀಲತೆಯ ಗುಣಲಕ್ಷಣ ಕುರಿತು ಕಟ್ಟೀಮನಿ ಕೊಡುವ ವ್ಯಾಖ್ಯಾನ ಹೀಗಿದೆ: "ಕೇವಲ ಕೂಗಾಟ ಕಿರಿಚಾಟಗಳು ಮತ್ತೊಬ್ಬರ ತೇಜೋವಧೆಗಳು ಪ್ರಗತಿಶೀಲವೆನಿಸಲಾರವು... ಪ್ರಗತಿಶೀಲತೆಯ ಕೂಗು ಹಾಕುವ ಈ ಲೇಖಕರು ಬರೆದುದು ಹೋಟಲು ರೂಮು, ಬೆಲೆವೆಣ್ಣುಗಳು ಬಾಟಲಗಳು ತಲೆಹಿಡುಕರು ಹಾಗೂ ವ್ಯಭಿಚಾರದ ಕಾದಂಬರಿಗಳನ್ನು. ಅವರಿಗೆ ಗೊತ್ತಿರುವುದನ್ನು ಅವರು ಬರೆದರೆನ್ನಿ. ಪ್ರಸಿದ್ಧಿಗಾಗಿ ಇವರು ನಡೆಸಿದ 'ಪ್ರಗತಿಶೀಲತೆ'ಯ ಸ್ಟಂಟು ನನಗೆ ಬಲುಬೇಗನೆ ಗೊತ್ತಾಯಿತು. ನಾನು ಆ ಗೊಂದಲಕ್ಕೆ ಸಿಕ್ಕಿಕೊಳ್ಳದೆ ನನಗೆ ಗೊತ್ತಿದ್ದ ದೀನ- ದಲಿತರ ಜೀವನ ಚಿತ್ರಗಳನ್ನು ರಚಿಸುತ್ತ ಬಂದೆ." (ಕಟ್ಟೀಮನಿ ಬದುಕು ಬರಹ, ೧೯೬೯, ಪು.೨೦)

ಇಂತಹ ಸೂತ್ರಹರಿದ ಪ್ರಗತಿಶೀಲತೆಯ ವೈರುಧ್ಯಗಳ ಮಧ್ಯ ಇದ್ದೂ ನಿರ್ವಿಣ್ಣರಾಗದೆ ತಮ್ಮದೇ ಆದ ಸಿದ್ಧಾಂತಗಳ ಅರಿವಿನಲ್ಲಿ ಬರೆದ ಕಟ್ಟೀಮನಿ ಬರಹಗಳು ಅಪೂರ್ವ ದಾಖಲೆಗಳು. ಕಾರಣ ಈ ಕಾಲದ ಬಹುಮುಖ್ಯ ಪ್ರೇರಣೆಗಳಾದ ಸ್ವಾತಂತ್ರ್ಯ ಚಳುವಳಿ, ಮಾರ್ಕ್ಸ್‌ವಾದದ ಪ್ರಭಾವ, ಹಿಂದೂ ಸಾಂಸ್ಕೃತಿಕ ಪುನರುಜ್ಜೀವನದ ಚಳುವಳಿಗಳು, ಸಾಂಪ್ರದಾಯಿಕ ತಿಳುವಳಿಕೆಯ ಸಿನಿಕತನವನ್ನು ಹೊಡೆದು ಹಾಕಿ ಸಮಾಜದ ನೈಜ ನೆಲೆಯ ಆಂತರಿಕ ತಲ್ಲಣಗಳನ್ನು ದುರ್ವ್ಯವಹಾರಗಳನ್ನು ಚಿತ್ರಿಸುವಲ್ಲಿ ಸಹಕರಿಸಿವೆ. ಕಟ್ಟೀಮನಿಯವರಲ್ಲಿ ಇವು ತುಂಬಾ ಕಲಾತ್ಮಕವಾಗಿ ಮೈಪಡೆದು ಕೊಂಡಿದ್ದೊಂದು ವಿಶೇಷ. ಯಾಕೆಂದರೆ ಫ್ಯಾಸಿಸಂ ಮತ್ತು ನಾಸಿಸಂಗಳ ಕಾರಣಕ್ಕಾಗಿ ಹುಟ್ಟಿಕೊಂಡ ಪ್ರಗತಿಶೀಲ ಚಳುವಳಿ ಎರಡನೇ ಮಹಾಯುದ್ಧದ ಹೊತ್ತಿನಲ್ಲಿ ಹಿಟ್ಲರನನ್ನು ವಿರೋಧಿಸುವುದಕ್ಕೆ ಪ್ರಾಮುಖ್ಯ ನೀಡಿತು. ಆದರೆ ಕಟ್ಟೀಮನಿ ಎಲ್ಲೋ ನಡೆಯುವ ಹೋರಾಟಗಳಿಗೆ ತನ್ನನ್ನು ಸವೆಯಿಸಿಕೊಳ್ಳದೇ ಇಂಡಿಯಾ ದೇಶದಲ್ಲಿ ನಡೆಯುತ್ತಿದ್ದ ದೇಶಿ ಚಳುವಳಿಗೆ ಬದ್ಧರಾಗಿ ದೇಶೀ ಪ್ರಗತಿಗಾಗಿ ಹಂಬಲಿಸಿದ್ದು ಅವರ ದೇಶಾಭಿಮಾನದ ಪ್ರತೀಕವಾಗಿದೆ. ಸಾಹಿತ್ತಿಕವಾಗಿ, ರಾಜಕೀಯವಾಗಿ ಸಾಮೂಹಿಕವಾಗಿ ಕೂಡ ತುಂಬಾ ಸಂಕೀರ್ಣವಾದ ಸ್ಥಿತಿ ಅದು. ಅಂತದ್ದರಲ್ಲಿ ಸುಧಾರಣೆಗಾಗಿ ಸಮಾಜವಾದಿಯಾಗಿ ಅದೂ ದೇಶೀ ನೆಲೆಯಲ್ಲಿ ಅವರು ಯೋಜಿಸಿದ್ದು ಸಣ್ಣ ಸಂಗತಿಯಲ್ಲ.

ಕಲೆಗಾಗಿ ಕಲೆ ಎನ್ನುವುದು ಕಟ್ಟೀಮನಿಯವರ ಬರವಣಿಗೆಯ ನಿಲುವಾಗಿರಲಿಲ್ಲ ಬದಲಾಗಿ ದಾರುಣ ಸ್ಥಿತಿಯಲ್ಲಿ ಬದುಕುತ್ತಿದ್ದ ಸುತ್ತಲಿನ ಹತ್ತಾರು ಜೀವಿಗಳ ಬದುಕು

ಬಂಗಾರವಾಗಬೇಕು ಎನ್ನುವುದು ಅವರ ಬರವಣಿಗೆಯ ಮೂಲ ಕಾಳಜಿಯಾಗಿತ್ತು. ಪರಕೀಯ ದಾಸ್ಯದಿಂದ ಮುಕ್ತಿ ಹೊಂದಿದ್ದರೂ ಅಧಿಕಾರದ ಪರಿಭ್ರಮಿತಕೊಳ್ಳಗಾದ ದೇಶೀ ಸಮಾಜದ ಒಂದು ವರ್ಗ ತನ್ನ ಧ್ಯೇಯ ಸಾಧನೆಗಾಗಿ ಸ್ವಜನ ದ್ರೋಹ, ಹೀನಗುಣಗಳ ಕೀಳು ಮನೋವೃತ್ತಿಯನ್ನು ಬೆಳೆಸಿಕೊಂಡಿತ್ತು. ಲಂಗು ಲಗಾಮಿಲ್ಲದೆ ದೇಶಭಕ್ತಿ ಹೆಸರಿನಲ್ಲಿ ಈ ದೇಶಭಕ್ತರು ನಡೆಸುವ ಬರ್ಬರತೆಗಳನ್ನು, ಲಂಚ, ಜಾತೀಯತೆ, ಸ್ವಾರ್ಥದಂತಹ ಮನೋವೃತ್ತಿಗಳನ್ನು ಕಟ್ಟೀಮನಿಯವರು ತೀವ್ರವಾಗಿ ಖಂಡಿಸಿದರು, ಕೆಂಡಕಾರಿದರು.

ಕಟುವಾದ ಬಡತನ ಹದವಾದ ಜೀವನಾನುಭವದಿಂದ ಸಿದ್ಧಗೊಂಡ ಗಡಸುತನ ಕಟ್ಟೀಮನಿ ಸಾಹಿತ್ಯದ ಮೂಲ ದ್ರವ್ಯ. ಸಮಕಾಲೀನ ಸಮಾಜ ವ್ಯವಸ್ಥೆಯ ದುರುಳುತನದ ವಿರುದ್ಧ ಆಕ್ರೋಶ, ಬಡವರ ಬಗೆಗಿನ ಪ್ರೀತಿ, ಅವರ ಬರವಣಿಗೆಯ ಹಿಂದಿನ ಪ್ರಾಮಾಣಿಕ ಪ್ರೇರಣೆಗಳು.

ಕರ್ನಾಟಕಕ್ಕಾಗಿ, ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಅಪೂರ್ವ ಸೇವೆ ಸಲ್ಲಿಸಿದ ಕಟ್ಟೀಮನಿ ಬೆಳಗಾವಿಯಲ್ಲಿ ೧೯೮೦ ಫೆಬ್ರುವರಿ ೭,೮,೯,೧೦ ರಂದು ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದದ್ದು ಅವರ ಸೇವೆಗೆ ಸಂದ ಗೌರವವಾಗಿದೆ. ೧೯೬೯-೧೯೭೨ರ ಅವಧಿಗೆ ಕರ್ನಾಟಕ ವಿಶ್ವವಿದ್ಯಾಲಯದ ಸಿನೆಟ್ ಸದಸ್ಯರಾಗಿ, ಕನ್ನಡ ಅಧ್ಯಯನ ಪೀಠದ ಪ್ರತ್ಯೇಕ ರಚನೆ, ವಿಶ್ವವಿದ್ಯಾಲಯ ಆಡಳಿತದಲ್ಲಿ ಕನ್ನಡಕ್ಕೆ ಮನ್ನಣೆ ದೊರಕಿಸುವಲ್ಲಿ ಸಕ್ರಿಯ ಪಾತ್ರ ವಹಿಸಿದರು. ರಾಜಕೀಯದಲ್ಲಿ ಆಸಕ್ತಿ ಇದ್ದರೂ ನೇರ ರಾಜಕೀಯಕ್ಕಿಳಿಯಲಿಲ್ಲ ಆದರೂ ೧೯೭೮ರಲ್ಲಿ ವಿಧಾನ ಪರಿಷತ್ತಿಗೆ ಸಾಹಿತ್ಯ ಕ್ಷೇತ್ರದ ಪ್ರತಿನಿಧಿಯಾಗಿ ನೇಮಕಗೊಂಡು ತಮ್ಮ ಪಾಲಿನ ಕರ್ತವ್ಯ ನಿಭಾಯಿಸುವಲ್ಲಿ ಯಶಸ್ವಿಯಾದರು.

## ಕಾದಂಬರಿಗಳು

ಕಟ್ಟೀಮನಿಯವರ ಕಾದಂಬರಿಗಳನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಸ್ಥೂಲವಾಗಿ ಎರಡು ಗುಂಪುಗಳಲ್ಲಿ ವಿಂಗಡಿಸಲಾಗಿದೆ:

೧. ಆತ್ಮ ಕಥನಾತ್ಮಕ ಕಾದಂಬರಿಗಳು

೨. ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾಳಜಿಯುಳ್ಳ ಕಾದಂಬರಿಗಳು.

### ೧. ಆತ್ಮ ಕಥನಾತ್ಮಕ ಕಾದಂಬರಿಗಳು:

ಸ್ವಾತಂತ್ರ್ಯದೆಡೆಗೆ, ಮಾಡಿ ಮಡಿದವರು, ಜ್ವಾಲಾಮುಖಿ ಮೇಲೆ, ಜರತಾರಿ ಜಗದ್ಗುರು, ನಾನು ಪೋಲೀಸನಾಗಿದ್ದೆ ಕಾದಂಬರಿಗಳಲ್ಲಿ ಚಿತ್ರಿತವಾದ ಶೇಖರ, ಚಂದ್ರಣ್ಣ ಕುಟ್ರೋಶನಿಯಂತಹ ಪಾತ್ರಗಳೆಲ್ಲ ಕಟ್ಟೀಮನಿಯವರ ಪ್ರತಿನಿಧಿಗಳೇ ಆಗಿವೆ. ಜೀವನದುದ್ದಕ್ಕೂ ಅವರು ಅನುಭವಿಸಿದ ಆತಂಕಗಳ ಕಲಾತ್ಮಕ ಕಥನಗಳು ಇವಾಗಿವೆ.

'ಸ್ವಾತಂತ್ರ್ಯದೆಡೆಗೆ' ಮತ್ತು 'ಮಾಡಿ ಮಡಿದವರು' ಸ್ವಾತಂತ್ರ್ಯ ವಿಪ್ಲವಗಳ ಅಮೂಲಾಗ್ರ ಕಥಾ ಭಿತ್ತಿಯನ್ನೊಳಗೊಂಡ ಕೃತಿಗಳು. ಇದರಲ್ಲಿ 'ಸ್ವಾತಂತ್ರ್ಯದಡೆಗೆ' ಕಟ್ಟೀಮನಿಯವರ ಮೊಟ್ಟಮೊದಲ ಕಾದಂಬರಿ (೧೯೪೬). ರಾಷ್ಟ್ರೀಯ ಹೋರಾಟಗಾರರ ಭಾಷಣ ಮೆರವಣಿಗೆಗಳಿಂದ ಆರಂಭವಾಗುತ್ತದೆ. ಮನೆಯಲ್ಲಿ ಕುಳಿತು ತಂಗಳ ರೊಟ್ಟಿ ತಿನ್ನುತ್ತಿದ್ದ ಹುಡುಗ ಶೇಖರ ಇದರಿಂದ ಪ್ರಭಾವಿತನಾಗುತ್ತಾನೆ. ಪೋಲೀಸ್ ಸಿಪಾಯಿಯ ಮಗನಾದ ಈ ಬಾಲಕ ಶೇಖರ ಊಟದ ಪರಿವೆಯಿಲ್ಲದೆ, ಮೆರವಣಿಗೆಯಲ್ಲಿ ಭಾಗಿಯಾಗುತ್ತಾನೆ. ಭಾಷಣಗಳಿಂದ ಪ್ರಭಾವಿತನಾಗುತ್ತಾನೆ. ರಾಷ್ಟ್ರೀಯ ಹೋರಾಟದ ಗೀಳು ಬೆಳೆಸಿಕೊಳ್ಳುತ್ತಿರುವ ತನ್ನಿಂದ ತಂದೆಯ ಉದ್ಯೋಗಕ್ಕೆ ತೊಂದರೆಯಾದೀತೆಂದು ಮನೆಬಿಟ್ಟು ಕಲ್ಲಾಪುರ ಎಂಬ ಹಳ್ಳಿ ಸೇರುತ್ತಾನೆ. ಅಲ್ಲಿನ ರೈತ ಕುಟುಂಬದೊಂದಿಗೆ ಬೆರೆತುಕೊಳ್ಳುತ್ತಾನೆ. ಜಮೀನ್ದಾರ, ಸಾಹುಕಾರ, ಪರಕೀಯ, ಸರಕಾರ, ಇವುಗಳ ಸಮಯ ಸಾಧಕತನವನ್ನು ಕಂಡು ಅವರ ವಿರುದ್ಧ ಚಳುವಳಿಯ ಅಗತ್ಯತೆಯನ್ನು

ಕಂಡುಕೊಳ್ಳುತ್ತಾನೆ. ಅದನ್ನು ರೈತಜನರಿಗೆ ತಿಳಿಸುತ್ತಾನೆ. ಶೇಖರನ ಈ ಪ್ರೇರಣೆಗಳಿಂದಾಗಿ ಅಜ್ಞಾನ ಅಂಧಕಾರದಲ್ಲಿದ್ದ ಬಡಜನತೆಯ ಶಕ್ತಿ, ಸುತ್ತಿದ ಸಂಕೋಲೆಗಳನ್ನು ತುಳಿದು ಸ್ವಾತಂತ್ರ್ಯದೆಡೆಗೆ ಪ್ರವಹಿಸುತ್ತದೆ. ಇಲ್ಲಿ ಬರುವ ಶೇಖರನ ಪಾತ್ರದಲ್ಲಿ ಸ್ವತಃ ಲೇಖಕರ ವ್ಯಕ್ತಿತ್ವವನ್ನು ಗುರುತಿಸಬಹುದು.

ಸ್ವಾತಂತ್ರ್ಯ ಸಂಗ್ರಾಮದ ತಳಮಳ ದೇಶೀ ಮತ್ತು ಅನ್ಯದೇಶೀ ವಸಾಹತುಗಳ ಬಗೆಗಿನ ಆಕ್ರೋಶ, ದೌರ್ಜನ್ಯಕ್ಕೆ ಸಿಕ್ಕು ನಲುಗಿದ ಬಹುಸಂಖ್ಯಾತ ಶ್ರಮಿಕ ಮತ್ತು ಬಡಜನತೆಯ ಕುರಿತ ಮಾನವೀಯ ಕಳಕಳಿ ಕಾದಂಬರಿಯ ಪ್ರಮುಖ ಆಶಯ.

'ಮಾಡಿ ಮಡಿದವರು' ಕಟ್ಟೀಮನಿಯವರ ಎರಡನೆಯ ಕಾದಂಬರಿ. ನಲವತ್ತೆರಡರ ಪ್ರಚಂಡ ಚಳುವಳಿಯ ತಲ್ಲಣಗಳು ಈ ಕಾದಂಬರಿಯ ವಸ್ತು. ಶೇಖರ ಮತ್ತು ಅವನ ಸಹಚರರು ಸ್ವಾತಂತ್ರ್ಯಕ್ಕಾಗಿ ಮಾಡುವ ಕೆಚ್ಚಿನ ಹೋರಾಟದ ಮೂಲಕ ಆಡಳಿತ ಯಂತ್ರವನ್ನು ನಿಷ್ಕ್ರಿಯಗೊಳಿಸುವುದು... ವಸಾಹತಿನ ನಿರಾಕರಣೆ, ದೇಸೀಯತೆಯ ಉಳಿಕೆ, ರಾಜಕೀಯ ಹಾಗೂ ಸಾಮಾಜಿಕ ತಾಕಲಾಟಗಳು ಇಲ್ಲಿನ ಮುಖ್ಯ ಅಂಶಗಳು. ವಿದೇಶೀ ವಸಾಹತಿನ ದಿಟ್ಟ ನಿರಾಕರಣೆಯೊಂದಿಗೆ ರಾಷ್ಟ್ರೀಯ ಸ್ವಾತಂತ್ರ್ಯದ ಪರಿಕಲ್ಪನೆ ಎರಡೂ ಕಾದಂಬರಿಗಳಲ್ಲಿನ ಪ್ರಮುಖ ಗ್ರಹಿಕೆ.

ಪ್ರಖರ ರಾಜಕೀಯ ವಿದ್ಯಮಾನಗಳನ್ನೊಳಗೊಂಡ ಕಾದಂಬರಿ 'ಜ್ವಾಲಾಮುಖಿಯ ಮೇಲೆ'. ಪ್ರಧಾನವಾಗಿ ಒಡೆಯರ ದುಡಿಯುವವರ ವರ್ಗಸಂಘರ್ಷದ ಕಥೆ; ಧುರೀಣತ್ವಕ್ಕಾಗಿ ಸೋಷಲಿಸ್ಟರು, ಕಮ್ಯೂನಿಸ್ಟರು ನಡೆಸುವ ಪೈಪೋಟಿ... ಯಾವ ಪಕ್ಷ ಅಧಿಕಾರಕ್ಕೆ ಬಂದರೂ ಕಾರ್ಮಿಕರ ಅವ್ಯಾಹತ ಯಾತನೆಗಳು ಹಾಗೇ ಇವೆ ಎಂಬ ಕ್ರೂರಸತ್ಯ... ಸ್ವಾತಂತ್ರ್ಯಾ ನಂತರದ ಭ್ರಮ ನಿರಸನತೆ ನಿರಂತರ ಶೋಷಣೆಯ ಹಲವಾರು ಮುಖಗಳ ವಾಸ್ತವ ಚಿತ್ರಣ ಕೃತಿಯ ಕೇಂದ್ರ ವಸ್ತು. ಈ ಕೃತಿಗೆ ೧೯೬೮ ರ ಸೋವಿಯತ್ ದೇಶದ ಪ್ರಶಸ್ತಿ ಲಭಿಸಿದೆ.

ಕೃತಿಯ ಕಥಾನಾಯಕ ಚಂದ್ರಣ್ಣ ಆದರ್ಶವಾದಿ, ಜೊತೆಯಲ್ಲಿ ಪತ್ರಕರ್ತ ಮತ್ತು ಪ್ರಾಮಾಣಿಕ. ಸ್ವಾತಂತ್ರ್ಯ ಸಿಕ್ಕರೂ ಜನತೆಗೆ ಆರ್ಥಿಕ ಸ್ವಾತಂತ್ರ್ಯ ದೊರೆತಿಲ್ಲ. ಈ ಬವಣೆಯಿಂದ ರೈತ, ಕೂಲಿಕಾರ, ಬಡವರನ್ನು ಮೇಲೆತ್ತಿ ಸಮಾನತೆಯನ್ನು ಕಲ್ಪಿಸುವುದು ಕಾಂಗ್ರೆಸ್‌ನ ಪರಮೋಚ್ಚ ಗುರಿ ಎಂದು ನಂಬಿದವ ತನ್ ಸ್ವಭಾವಕ್ಕೆ ವಿರುದ್ಧವಾಗಿ ಶಿವಯೋಗಿಯ ಹಿಂದೆ ಬಂಡವಾಳಗಾರರ ಲಿಮಿಟೆಡ್ ಕಂಪನಿಯೊಂದರ ಸಹಾಯದೊಂದಿಗೆ ಪತ್ರಿಕೆ ನಡೆಸಲು ಧರ್ಮಪುರಕ್ಕೆ ಹೋಗುತ್ತಾನೆ. ಇಲ್ಲಿ ಬಡವ ರಂಗಣ್ಣ ಎತ್ತುವ ಆತಂಕ ವಸ್ತುನಿಷ್ಠವಾದದ್ದು. "ಶ್ರೀಮಂತರಿಗೂ ನಿಮಗೂ ಕೂಡಿ ನಡೆಯಬಹುದೆ" ಕಾಂಗ್ರೆಸ್‌ನ ಅಧ್ವಾನತೆಗಳನ್ನು ಪ್ರತೀಕಿಸುವ ಈ ಮಾತು ಒಂದು ಕಾಲಕ್ಕೆ ಕಾಂಗ್ರೆಸ್ಸಿನ ಬದ್ಧ ವೈರಿಗಳಾಗಿದ್ದವರೂ ಸ್ವಾತಂತ್ರ್ಯ ಬಂದ ಮೇಲೆ ಒಮ್ಮೆಲೆ

ಟೋಪಿ ಬದಲಾಯಿಸಿ ಕಾಂಗ್ರೆಸ್ಸಿಗರಾಗಿದ್ದಾರೆ ಎನ್ನುವಲ್ಲಿ ಕಾಂಗ್ರೆಸ್ಸಿನ ಒಳಮುಖಗಳನ್ನು ಬೆಳಕಿಗೆ ತರುತ್ತದೆ.

ಧರ್ಮಪುರದಲ್ಲಿ ಬಂದ ಅನುಭವಗಳಿಂದಾಗಿ ಆದರ್ಶವಾದಿ ಅಹಿಂಸಾವಾದಿಯಾಗಿದ್ದ ಚಂದ್ರಣ್ಣ ಕ್ರಾಂತಿಕಾರಿ ನಿಲುವಿನೊಂದಿಗೆ ಸಂಬಂಧ ಸಾಧಿಸಿಕೊಳ್ಳುತ್ತಾನೆ. ಜನರ ಕೈಗೆ ಅಧಿಕಾರ ಬರಬೇಕು, ಬಡವರ ರಾಜ್ಯ ಸ್ಥಿರವಾಗಬೇಕು ಹೋರಾಟ ನಡೆಯಬೇಕು, ಅದು ಅಹಿಂಸಾತ್ಮಕವಾಗಿರಬೇಕು ಇತ್ಯಾದಿ ಆದರ್ಶಗಳಲ್ಲಿನ ದ್ವಂದ್ವ ಕಮ್ಯುನಿಸ್ಟ್ ಧೋರಣೆಯ ಶಂಕರನಂಥವರಿಗೆ ಬಾಲಿಶವಾಗಿ ಕಾಣುತ್ತದೆ. ಈ ಈರ್ವರ ಸಂವಾದದ ಮೂಲಕ ಕಮ್ಯೂನಿಸ್ಟ್ ಪ್ರಣಾಳಿಕೆಯನ್ನು ಸೈದ್ಧಾಂತಿಕ ತಳಹದಿಯ ಮೇಲೆ ನಿರೂಪಿಸಲು ಲೇಖಕರು ಪ್ರಯತ್ನಿಸಿದ್ದಾರೆ. ಕಮ್ಯೂನಿಸ್ಟ್ ಪರ ಚಿಂತನೆಯಲ್ಲಿ ಖಚಿತತೆ ಹಿಂದಿನ ಎರಡೂ ಕೃತಿಗಿಂತ ಇಲ್ಲಿ ಸ್ಪಷ್ಟವಾಗಿ ಮೂಡಿದೆ.

'ಮೋಹದ ಬಲೆಯಲ್ಲಿ' 'ಜರತಾರಿ ಜಗದ್ಗುರು' 'ನಾನು ಪೋಲೀಸನಾಗಿದ್ದೆ' 'ಬಂಗಾರದ ಜಿಂಕೆಯ ಹಿಂದೆ' ಇಲ್ಲೆಲ್ಲ ಕಾಮ ಪ್ರೇಮಗಳ ಗುದ್ದಾಟವನ್ನು ಕಾಣುತ್ತೇವೆ.

**೨. ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾದಂಬರಿಗಳು:**

ಇದರಲ್ಲಿ ಮತ್ತೆ ಮೂರು ವರ್ಗಗಳನ್ನು ಮಾಡಿಕೊಳ್ಳಬಹುದು.

ಅ. ವರ್ಣ ಸಂಘರ್ಷ ಪ್ರಧಾನವಾಗುಳ್ಳ ಕಾದಂಬರಿ

ಆ. ವೇಶ್ಯಾಸಮಸ್ಯೆ ಪ್ರಧಾನವಾಗುಳ್ಳ ಕಾದಂಬರಿ

ಇ. ಗ್ರಾಮೀಣ ಬದುಕನ್ನು ಚಿತ್ರಿಸುವ ಕಾದಂಬರಿ.

ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಮಹತ್ವವುಳ್ಳ ನಾಲ್ಕು ಕಾದಂಬರಿಗಳನ್ನು ಮೊದಲು ನೋಡಬಹುದು. ನರಗುಂದ ಬಂಡಾಯ (ಸಮರ ಭೂಮಿ ೧೯೫೬) ಪೌರುಷ ಪರೀಕ್ಷೆ (೧೯೫೮) ಸಂಗೊಳ್ಳಿರಾಯ ನಾಯಕ (೧೯೬೮) ಕಿತ್ತೂರು ಕೇಸರಿ.

ನರಗುಂದ ಬಂಡಾಯ ನಿಪುತ್ರಕನಾದ ಭಾಸ್ಕರರಾಯ ದತ್ತು ಪುತ್ರನನ್ನು ತೆಗೆದುಕೊಳ್ಳುವ ಕಾರಣದಿಂದ ಹೊತ್ತಿಕೊಳ್ಳುವ ಕಿಡಿಯಾಗಿದೆ. ಇದು ಮುಖ್ಯವಾಗಿ ಆಂತರಿಕ ಕಲಹದ ಕಾದಂಬರಿಯಾಗಿದೆ. ಬಾಸ್ಕರರಾಯನ ಅದಕ್ಷತೆ, ಅವಿವೇಕ, ವ್ಯಕ್ತಿತ್ವದಲ್ಲಿನ ಬಿರುಕು, ಪಿತೂರಿಗಾರರ ಕೈಚಳಕ, ಒಟ್ಟು ಬಂಡಾಯದ ವಿಫಲತೆಗೆ ಹೇಗೆ ಕಾರಣವಾದವು ಎನ್ನುವುದು ಇಲ್ಲಿನ ಕಥಾ ಸಂವಿಧಾನ.

ಕಿತ್ತೂರು ಸಂಸ್ಥಾನದ ಮುತ್ಸದ್ದಿ ದೊರೆ ಮಲ್ಲಸರ್ಜನ ಆಳ್ವಿಕೆಯ ವಿಷಯ 'ಪೌರುಷ ಪರೀಕ್ಷೆ'. ಮಲ್ಲಸರ್ಜ ಮತ್ತು ಟಿಪ್ಪುವಿನ ಮಧ್ಯದ ಕದನದ ವಿಷಯ, ಮಲ್ಲಸರ್ಜನ ಬಂಧನ, ರಾಣಿಯ ಸಾಹಸ, ಕಿತ್ತೂರು ಸಂಸ್ಥಾನದ ಉಳಿಯುವಿಕೆ, ಕಥೆಯ ಕೇಂದ್ರ

ವಸ್ತು. ಕಿತ್ತೂರು ಸಂಸ್ಥಾನದ ಅಸ್ತಿತ್ವದ ಪುನರ್ ಸ್ಥಾಪನೆ 'ಸಂಗೊಳ್ಳಿರಾಯ ನಾಯಕ'ದ ಕಥಾವಸ್ತು ಕಿತ್ತೂರು ಕೇಸರಿ ಬಗ್ಗೆ ವಿಶೇಷ ಮಾಹಿತಿಯೇನು ನನಗೆ ಲಭ್ಯವಾಗಲಿಲ್ಲ.

**ಆ. ವರ್ಣ ಸಂಘರ್ಷವನ್ನು ಪ್ರಧಾನವಾಗುಳ್ಳ ಕಾದಂಬರಿಗಳು:**

'ನೀ ನನ್ನ ಮುಟ್ಟಬೇಡ' 'ಹರಿಜನಾಯಣ' 'ಬೆಳಗಿನ ಗಾಳಿ' 'ಜನಿವಾರ ಶಿವದಾರ' ವರ್ಣಸಂಘರ್ಷವನ್ನು ಪ್ರಧಾನವಾಗಿಸಿಕೊಂಡಿವೆ.

'ನೀ ನನ್ನ ಮುಟ್ಟಬೇಡ'ದಲ್ಲಿ ಹೊಲೆಮಾದಿಗರ ದೀನಸ್ಥಿತಿಯೇ ವಸ್ತುವಾಗಿದೆ. ಉಚ್ಚ ಜಾತಿಯವರು ನೀಚ ಜಾತಿಯವರಾಗುವ, ನಿಜವಾದ ನೀಚ ಜಾತಿಯವ-ರೆಂದೆನಿಸಿದ ಜನ ಉಚ್ಚ ಜಾತಿಯವರಾಗಿ ಬದುಕುವ ಸ್ಥಿತಿಯ ಚಿತ್ರಣ ಇಲ್ಲಿ ಕಾಣುತ್ತದೆ.

ಕಥಾನಾಯಕ ಮಹದೇವ ಪ್ರಖರ ಸುಧಾರಣಪರ ಮನೋವೃತ್ತಿಯವನು. ತನ್ನ ಜನರ ಹೀನ ಸ್ಥಿತಿಗೆ ಕಾರಣವಾದ ಅಜ್ಞಾನ ಮೂಢನಂಬಿಕೆಗಳನ್ನು ತೀವ್ರವಾಗಿ ಹೊಡೆದುಹಾಕಬೇಕೆನ್ನುವವನು. ರೇಣುಕಾದೇವಿ ಮಗಳು ಚಂದ್ರಿಯನ್ನು ಸೂಳೆ ಬಿಡುವ ಪ್ರಸಂಗದಲ್ಲಿ

> "ದೇವರಿಗೆ ಸೂಳೆ ಬಿಡೂದು ಮೂರ್ಖತನ. ಇನ್ನಾದರು ಈ ಹೊಲಸು ಪದ್ಧತಿ ಬಿಡೂನು; ಚಂದ್ರಾನ ಸೂಳಿ ಬಿಡೂದು ನಾನೆಂದೂ ಒಪ್ಪುದಿಲ್ಲ" (ಪುಟ ೮೩).
> ಮಹದೇವನ ಈ ಮಾತಿಗೆ ಮೂಲಭೂತವಾದಿಗಳು -
>
> "ಯಾರಲೇ ನೀ ಮಗನ ನಮಗ ಬುದ್ಧಿ ಹೇಳಾವ ಮಾರಿ ಮ್ಯಾಲ ಮೀಸಿ ಬಂದಿಲ್ಲ" (ಪುಟ ೮೩)

ಎನ್ನುವಲ್ಲಿನ ಪ್ರತಿರೋಧ ಮಹದೇವನನ್ನು ಬಡಿಸಿಬಿಡುತ್ತದೆ. ಇಷ್ಟಾದರೂ ತನ್ನ ಹಟ ಬಿಡದೆ ಸಾಧಿಸಬೇಕೆನ್ನುವ ಹಂಬಲದಿಂದ ಕಾದಂಬರಿ ಉದ್ದಕ್ಕೂ ಕ್ರಿಯಾತ್ಮಕವಾಗಿ ಉಳಿಯುತ್ತದೆ.

'ಹರಿಜನಾಯಣ'ದಲ್ಲಿ ಇದೇ ಕಥೆ.

ಇಂಡಿಯಾದ ಸಂಕೀರ್ಣ ಸಮಾಜ ವ್ಯವಸ್ಥೆಯ ಮತ್ತು ವಿವಿಧ ವಿಚಾರಧಾರೆಗಳೊಡನೆ (ಮಾರ್ಕ್ಸ್, ಲೋಹಿಯಾ, ಗಾಂಧಿ, ಅಂಬೇಡ್ಕರ ಹಳ್ಳಿಯ ಜೀವನದ ಮೇಲೆ ಪ್ರಭಾವ ಬೀರಿದಂಥವು) ಮುಖಾಮುಖಿಯಾಗುವುದರೊಟ್ಟಿಗೆ ಕ್ರಿಯಾಶೀಲನಾಗುವ ನಾಯಕ ಶಂಭು, ಮುಖ್ಯ ಪ್ರವಾಹಗಳ ಮಿತಿಯ ಅರಿವಿದ್ದೂ ಸಂಘರ್ಷದ ಕೇಂದ್ರ ಬಿಂದುವಾಗಿ ಇಡೀ ಕಾದಂಬರಿಯಲ್ಲಿ ನಿರ್ವಹಣೆಗೊಳ್ಳುತ್ತಾನೆ. ಒಟ್ಟು ಅವರ್ಣೀಯ ಜನರೆಲ್ಲ ಒಟ್ಟಾಗಿ ಶೋಷಣೆಯ ವಿಮೋಚನೆಗೆ ಹೋರಾಡಲು ಸಿದ್ಧವಾಗೋದು ಪ್ರಸ್ತುತ ಕಾದಂಬರಿಯಲ್ಲಿ ಪ್ರಧಾನವಾಗಿ ಕಾಣುವಂಥದ್ದು.

ಬೆಳಗಿನ ಗಾಳಿಯಲ್ಲಿಯ ಕಥಾನಾಯಕ 'ರಾಜ' ಕೆಳ ಜಾತಿಯಲ್ಲಿ ಹುಟ್ಟಿದವ. ತನ್ನ ಸುತ್ತಲು ಕವಿದಿರುವ ಜಾತಿ ವ್ಯವಸ್ಥೆಯ ಕರಾಳತೆಯನ್ನು ಕಂಡು ರೋಷಗೊಳ್ಳುತ್ತಾನೆ. ಜಾತಿ ಮೂಲವಾದ ಕೀಳ್ಮೆಯನ್ನು ತೆಗೆದೊಗೆಯಲು ಶಾಲೆಕಲಿಯುವುದು ಈ ಹಿನ್ನೆಲೆಯಲ್ಲಿ ಆತ ಪಡೆಯುವ ಅನುಭವ... ಸಂಘರ್ಷ.... ಕಾದಂಬರಿಯ ವ್ಯಾಪ್ತಿಯಲ್ಲಿ ಜೀವಂತವಾಗಿ ನಿಂತಿದೆ.

'ಜನಿವಾರ- ಶಿವದಾರ'ದಲ್ಲಿ ಉಚ್ಚ-ನೀಚ, ಮೇಲು ಕೀಳುಗಳ ಉದ್ಧಟತನಗಳ ವ್ಯಾಪಾರವಿದೆ. ಸದಾನಂದ ಶಾಂತಾರಂತಹ ಮುಗ್ಧ ಪ್ರೇಮಿಗಳು ಈ ಜನಿವಾರ-ಶಿವದಾರಗಳಿಗೆ ಬಲಿಯಾಗುವ ದುರಂತ ಕಾದಂಬರಿಯ ವಸ್ತು. ಅಧಿಕಾರ, ಬಡತನ, ವಯಸ್ಸು, ಮದುವೆ, ಜಾತಿ, ಇಲ್ಲಿನ ಸಂಕೀರ್ಣತೆಗಳು ಈ ಸಂಕೀರ್ಣತೆಯಿಂದ ಬಿಡಿಸಿಕೊಳ್ಳುವಲ್ಲಿ ಶಾಂತಾ ಸದಾನಂದರು ಅಹರ್ನಿಶಿ ಹೋರಾಡುತ್ತಾರೆ.

"ನನಗೆ ಮದುವೆಯ ವಯಸ್ಸು ಮೀರಿ ಹೋಗಿದೆ ಮದುವೆಯ ಮಾರುಕಟ್ಟೆಯಲ್ಲಿ ಮಂಡಿಸಿದ್ದರೆ ಗಿರಾಕಿ ಸಿಕ್ಕಲಿಲ್ಲ." (ಪುಟ ೪೧)

ಬಡವಳು, ಬ್ರಾಹ್ಮಣಳು ಎಂಬ ಕಾರಣಕ್ಕಾಗಿ ಮದುವೆಯಾಗದೇ ಉಳಿದಿದ್ದಾಳೆ. ಸಂಪ್ರದಾಯಬದ್ಧತೆ ಅವಳ ಆಕಾಂಕ್ಷೆಗಳನ್ನು ಮುರುಟಿಸಿದೆ. ಇದರಿಂದ ಬೇಸತ್ತಿದ್ದಾಳೆ. ಲಿಂಗಾಯತ ಸದಾನಂದನೊಂದಿಗೆ ಊರುಬಿಟ್ಟು ಹೋಗುವುದರ ಮೂಲಕ ತನಗೆ ತೊಡಕಾದ ಸಂಪ್ರದಾಯವನ್ನು ಮೀರುತ್ತಾಳೆ. ನವಸಮಾಜ ವ್ಯವಸ್ಥೆಯತ್ತ ಕಾಲಿಡುತ್ತಾಳೆ.

ಒಟ್ಟು ವರ್ಣ ವರ್ಗ ಭಾವನೆಯ ವಿಕೃತತೆಗಳು ವ್ಯಕ್ತಿ ನೆಲೆಯಿಂದ ಹುರಿಗೊಂಡು ಸಮಾಜದ ಸಾಂಘಿಕ ಜೀವನದಲ್ಲಿ ಕ್ರಿಯೆ ಪ್ರತಿಕ್ರಿಯೆಗಳ ಮೂಲಕ ಪ್ರಕಟವಾಗುವುದು ಇಲ್ಲಿನ ಮುಖ್ಯ ಕಾಣ್ಕೆ.

**ಆ. ವೇಶ್ಯಾ ಸಮಸ್ಯೆಯನ್ನು ಪ್ರಧಾನವಾಗುಳ್ಳ ಕಾದಂಬರಿಗಳು:**

'ಬೀದಿಯಲ್ಲಿ ಬಿದ್ದವಳು' 'ಖಾನಾವಳಿ ನೀಲಾ' 'ಪಾತರಗಿತ್ತಿ' 'ಪ್ರಪಾತ' 'ಜಲತರಂಗ', 'ದ್ರೋಹಿ' ಕಾದಂಬರಿಗಳನ್ನು ಈ ಗುಂಪಿನ ಮುಖ್ಯ ಕಾದಂಬರಿಗಳೆಂದು ಗುರುತಿಸಬಹುದು.

ಹಳ್ಳಿಯ ಹುಡುಗಿ ಯುಮುನ (ನಾಯಕಿ) ತನ್ನಿಚ್ಛೆಗೆ ವಿರುದ್ಧವಾಗಿ ಸೂಳೆಯಾಗಬೇಕಾದ ಸ್ಥಿತಿ... ನಗರ ಸೂಳೆಯರ ದುರ್ಭರ ಜೀವನ... 'ಬೀದಿಯಲ್ಲಿ ಬಿದ್ದವಳು' ಕಾದಂಬರಿಯ ಸಂವಿಧಾನ. ಯಮುನೆ ಕೊನೆಗೂ ಅದನ್ನೆ ಒಪ್ಪಿಕೊಂಡು ಬದುಕುವ ಅಸಹಾಯಕತನದ ಸ್ಥಿತಿ ಕೃತಿಯಲ್ಲಿ ಚೆನ್ನಾಗಿ ಮೂಡಿ ಬಂದಿದೆ.

ವ್ಯಕ್ತಿಯ ವೈಯಕ್ತಿಕ ತೆವಲುಗಳ ಕರಾಳ ಮುಖಗಳನ್ನು 'ಖಾನಾವಳಿ ನೀಲಾ' ಪ್ರತೀಕಿಸುತ್ತದೆ. ಶ್ರೀಶೈಲನೆಂಬ ಯುವಕನ ಮೂಲಕ 'ನೀಲಾ'ಳನ್ನು ಅನುಭೋಗಿಸುವ ಪ್ರಯತ್ನ ಇಲ್ಲಿನ 'ದೀನಬಂಧು' ಪತ್ರಿಕೆ ಸಂಪಾದಕ ಷಡಕ್ಷರಪ್ಪನದು. ಆದರೆ ಅದು

ವಿಫಲವಾಗುತ್ತದೆ. ಕಾರಣ ಶ್ರೀಶೈಲ ಮತ್ತು ನೀಲಾ ಆದರ್ಶ ಬದುಕಿಗಾಗಿ ಹಂಬಲಿಸುವ ಯುವ ಜೋಡಿಗಳು, ಪ್ರಣಯಿಗಳು.

'ಪಾತರಗಿತ್ತಿ' ದೈಹಿಕ ಕಾಮನೆಗಳನ್ನು ತಣಿಸಿಕೊಳ್ಳಲು ಐಹಿಕ ಸುಖಭೋಗಗಳನ್ನು ಅನುಭವಿಸಲು ಗಂಡನಿದ್ದು ಇನ್ನೊಬ್ಬನನ್ನು ಅರಸುವ ವಸ್ತುವನ್ನೊಳಗೊಂಡ ಕಾದಂಬರಿ.

> "ನಮಗೆ ಮಕ್ಕಳಾಗದಿದ್ದರೆ ಬಂಜೆ ಅಂತ ಹಳೀತಾರೆ, ಮನೆ ಬಿಟ್ಟು ಹೊರದೂಡುತ್ತಾರೆ. ಹ್ಯಾಗಾದ್ರು ಮಾಡಿ ನಾವು ಮಕ್ಕಳನ್ನು ಹಡೀಬೇಕಂತ ಬೇರೆ ಗಂಡನ್ನ ಮಾಡಿಕೊಂಡರೆ ಹ್ಯಾಗೆ? ಎನ್ನುವಲ್ಲಿ ಹೆಂಡತಿಗೆ ತಿಳಿಯದಂತೆ ಗಂಡ ಮಾಡುತ್ತಾನೆ. ಗಂಡಿಗೆ ತಿಳಿಯದಂತೆ ಹೆಣ್ಣು ಕೂಡ ಮಾಡಿದರಾಯ್ತು. ಇಬ್ಬರಿಗೂ ಬೇಕಾಗಿದ್ದು ಮಕ್ಕಳು. ಅವು ಯಾರಿಂದ ಅದ್ರೇನು?.."

ಪುರುಷ ಪ್ರಧಾನ ಸಮಾಜದ ಗೋಸುಂಬೆತನದ ಪರಿಯನ್ನು ಪ್ರತಿಭಟಿಸುವ ಮೂಲಕ ಹೆಣ್ಣು ಸಮಾನ ಮನಸ್ಕಳಾಗುವ, ಮುಕ್ತ ಲೈಂಗಿಕತೆಯನ್ನು ಬಯಸುವ ಸ್ವಚ್ಛಂದತೆಯನ್ನು ಕಾಣುತ್ತೇವೆ.

"ಪ್ರಪಾತ" ಬದುಕಿನ ಬಿರುಗಾಳಿಯಲ್ಲಿ ತರೆಗೆಲೆಗಳಂತೆ ಛಿದ್ರ-ವಿಚ್ಛಿದ್ರವಾಗಿ ಎಸೆಯಲ್ಪಟ್ಟು ಕೊನೆಗೂ ಮೆಚ್ಚಿದವನೊಂದಿಗೆ ಬಾಳಲು ಬಯಸಿದ ತರಳೆ 'ರಾಧೆ' ಇವಳ ಮರು ಜೀವನಕ್ಕೆ ಮುಂದಾಗುವ ಆದರ್ಶ ಪ್ರೇಮಿ 'ಗೋಪಾಲ'. ಈ ಸಂಬಂಧಕ್ಕೆ ಮೂಗು ಮುರಿಯುವ ಸಮಾಜ, ಆಗುವ ದುರಂತವನ್ನು ಈ ಕಾದಂಬರಿ ಚಿತ್ರಿಸುತ್ತದೆ. ವಾಸ್ತವ ಸೃಷ್ಟಿಯಲ್ಲಿನ ಸಾವಿರಾರು ವ್ಯಕ್ತಿಗಳ ಸ್ವಭಾವಗಳ ಪ್ರತೀಕ ಇಲ್ಲಿನ ಪಾತ್ರಗಳಾಗಿವೆ. ಕಾದಂಬರಿ ರಾಧೆ, ಗೋಪಾಲ, ರಾಮಣ್ಣ, ರಂಗರಾಯ ಇವರ ಸುತ್ತ ಹರಡಿಕೊಂಡಿದೆ. ರಾಧೆ- ಗೋಪಾಲರ ಅಂತರಂಗದ ತಲ್ಲಣಗಳ ನಯವಾದ ಚಿತ್ರಣವಿದೆ.

'ದ್ರೋಹಿ' ಅಮಾಯಕನೊಬ್ಬ ಸ್ವಾರ್ಥಿಗಳ ಕೈಚಳಕದಿಂದ ದುರಂತಕ್ಕೆ ಬಲಿಯಾಗುವ ಕಥೆ. 'ಕುಂಬಾರ ನಿನಗ್ಯಾಕೋ ಗೊಂಬಿ ಮಾಟದ ಹೆಣ್ಣು. ಎನ್ನುವ ತತ್ವ ಈ ಕಾದಂಬರಿಯದಾಗಿದೆ. 'ಭಾರ್ಯಾ ರೂಪವತೀ ಶತ್ರು' ಎನ್ನುವಂತೆ ಕಡಿಮೆ ಅಂತಸ್ತು ಹೊಂದಿದ ಲಕ್ಷ್ಮಣ ರೂಪವತಿಯಾದ ತಾರಾಳನ್ನು ಅನುಭವಿಸುವ ಪರಿ ಕೆಲ ಶ್ರೀಮಂತರಿಗೆ ಹಿಡಿಸುವುದಿಲ್ಲ. ತುಂಬ ವರ್ಚಸ್ಸುಳ್ಳ ಗುರುಶೆಟ್ಟಿ ಮತ್ತು ಮುರಾರಿ ತಾರಾಳನ್ನು ಲಕ್ಷ್ಮಣನಿಂದ ಕಸಿದುಕೊಳ್ಳುವ ಪ್ರಯತ್ನ ಕಾದಂಬರಿಯ ಇನ್ನೊಂದು ಧಾರೆ.

"ಜಲತರಂಗ" ಪೂರ್ವ ಯೌವನದ ಯುವಕ - ಯುವತಿಯರ ಮನೋ ವ್ಯಾಪಾರ ಚಿತ್ರಣ. ಕಥೆಗಾರರೆ ಹೇಳುವಂತೆ ನಾಯಕ ಮಹಾಂತನ ಅನುಭವಗಳಲ್ಲಿ ಹೆಚ್ಚಿನವು ನನ್ನ ಅನುಭವಗಳೇ (ಕಾ.ಕ. ೧೯೮೧,೪೩೮). ಅನುಭವದ ಸೂಕ್ಷ್ಮಗಳೊಂದಿಗೆ ಕಾಮದ ದಟ್ಟವಾದ ಪರಿತಪಿಕೆ ತುಂಬ ಕಲಾತ್ಮಕವಾಗಿ ಮೈಪಡೆದುಕೊಂಡಿದೆ.

### ಇ. ಗ್ರಾಮೀಣ ಬದುಕನ್ನು ಚಿತ್ರಿಸುವ ಕಾದಂಬರಿಗಳು:

ಕಟ್ಟೀಮನಿಯವರ ಹೆಚ್ಚು ಕಾದಂಬರಿಗಳು ಮಲಾಮರಡಿ ಪರಿಸರದಲ್ಲೇ ಕ್ರಿಯಾತ್ಮಕವಾದಂಥವು. ಮುಖ್ಯವಾಗಿ ಇಲ್ಲಿ ಗ್ರಾಮ ಬದುಕಿನ ದಟ್ಟ ಅನುಭವವುಳ್ಳ ಮೂರು ಪ್ರಾತಿನಿಧಿಕ ಕೃತಿಗಳನ್ನು ವಿವರಿಸಿಕೊಳ್ಳಬಹುದು.

'ಹೆಂಡತಿ', 'ಮಣ್ಣು ಮತ್ತು ಹೆಣ್ಣು' 'ಸೈತಾನ'.

'ಹೆಂಡತಿ', 'ಮಣ್ಣು ಮತ್ತು ಹೆಣ್ಣು', ಕಾದಂಬರಿಯಲ್ಲಿ ನವನಾಗರಿಕತೆಯ ಭ್ರಷ್ಟ ರಾಜಕೀಯ ಕೊಳಕುತನಗಳು, ಹೆಂಡ-ಹೆಣ್ಣುಗಳ ಸಹವಾಸದಿಂದ ಗಬ್ಬೆದ್ದು ಹೋಗುತ್ತಿರುವ ಗ್ರಾಮಜೀವನದ ಚಿತ್ರಣವಿದೆ. ಹೆಣ್ಣು- ಮಣ್ಣುಗಳ ಕಾರಣಕ್ಕಾಗಿ ನಡೆಯುವ ಮೇಲಾಟಗಳು. ಈ ಮಧ್ಯೆ ಅಮಾಯಕರು ಪಡುವ ಯಾತನೆ. ನಿಚ್ಚಳವಾಗಿ ಚಿತ್ರಿತವಾಗಿದೆ. ತಾಯಿ-ಮಗ, ಅತ್ತೆ- ಸೊಸೆ, ತಾಯಿ-ಮಗ-ಸೊಸೆ ಇವರ ಮಧ್ಯದ ವೈರುಧ್ಯಗಳ ವಾಸ್ತವತೆ ತಾಯಿಯೇ ಕುಳಿತು ಮಗ ಮತ್ತು ಸೊಸೆಯರ ಬಾಳು ಹಾಳು ಮಾಡುವ ಅವಿವೇಕತನವನ್ನು 'ಹೆಂಡತಿ' ಕಾದಂಬರಿಯಲ್ಲಿ ಕಾಣುತ್ತೇವೆ.

'ಸೈತಾನ' ೧೯೮೫ರಲ್ಲಿ ಬರೆದ ಕಾದಂಬರಿ ಗ್ರಾಮ ಜೀವನದ ದಟ್ಟವಾದ ಅನುಭವಗಳ ಹಿನ್ನೆಲೆಯಲ್ಲಿ ರೂಪಗೊಂಡದ್ದು. 'ಹತ್ತಾರು ವರ್ಷಗಳು ಸೈನ್ಯದಲ್ಲಿದ್ದು ನೆಮ್ಮದಿ ಬದುಕಿಗಾಗಿ ಹಳ್ಳಿಗೆ ಬಂದ 'ಸೈತಾನ' ಎದುರಿಸುವ ಸಮಸ್ಯೆಗಳು, ಅವು ಪಡೆದುಕೊಳ್ಳುವ ತಿರುವು ಇಲ್ಲಿನ ಮುಖ್ಯ ವಸ್ತು. ಆಸ್ತಿಯ ಆಸೆ, ಆ ಮೂಲಕ ಬಿಚ್ಚಿಕೊಳ್ಳುವ ಅತೃಪ್ತ ಲೈಂಗಿಕ ಬಯಕೆ, ಮೈಮಾಟ ಒಂದರಿಂದಲೇ ಇಡೀ ಅಧಿಕಾರ ಬಲವನ್ನು ನಿಯಂತ್ರಿಸುವ ಇಲ್ಲಿನ ಹೆಣ್ಣು ಪಾತ್ರಗಳು, ದಿಟ್ಟ ಮತ್ತು ಸ್ವಾಭಿಮಾನವುಳ್ಳಂಥವು. ಇಲ್ಲಿನ ಎಲ್ಲ ಪಾತ್ರಗಳು ಒಬ್ಬರನ್ನೊಬ್ಬರು ಆಡಿಕೊಳ್ಳುತ್ತ ತೋರಿಸುವ ಸಾಚಾತನ- ಆಸ್ತಿಯ ಕಬಳಿಕೆಯ ಸಂಚು, ವ್ಯಂಗ್ಯ - ಪುಷ್ಕಳವಾಗಿ ಮೂಡಿಬಂದಿವೆ.

### ಈ. ಇನ್ನುಳಿದ ಕಾದಂಬರಿಗಳು:

'ಗೋವಾದೇವಿ', 'ಗ್ರಾಮಸೇವಿಕಾ', 'ತಿರುಗಣಿ', 'ಕತ್ತರಿ ಪ್ರಯೋಗ', 'ಐದನೆಯ ದೇಸಾಯಿಣಿ' 'ಪ್ರಿಯಬಾಂಧವಿ', 'ಗೆಳೆಯನ ಮಡದಿ', 'ಜೊತೆಗಾತಿ', 'ಮಗನ ತಾಯಿ', 'ಚಕ್ರವ್ಯೂಹ', 'ಬೆಂಗಳೂರಿಗೊಂದು ಟಿಕೇಟು', 'ಆಶ್ರಮವಾಸಿ' - ಈ ಎಲ್ಲ ಕಾದಂಬರಿಗಳಲ್ಲಿ ಬಹುಮುಖ್ಯವಾಗಿ ಮನುಷ್ಯನ ವಿವಿಧ ವಿಕೃತ ಮುಖಗಳ ದರ್ಶನ, ಬದುಕಿನ ಜಟಿಲತೆಗಳು, ಅನಿರೀಕ್ಷಿತವಾಗಿ ಅವು ಪಡೆದುಕೊಳ್ಳುವ ತಿರುವುಗಳು, ಮಾನವೀಯ ತುಡಿತಗಳು ಪ್ರಧಾನವಾಗಿ ಕಂಡುಬರುತ್ತವೆ.

ಒಟ್ಟಿನಲ್ಲಿ ಕಟ್ಟೀಮನಿಯವರು ತತ್ವಸಿದ್ಧಾಂತಗಳ ಗೊಂದಲ ಇಲ್ಲದೆ ಜೀವನದ ಗಟ್ಟಿಮುಟ್ಟಾದ ವಿಭಿನ್ನ ಅನುಭವ, ಗಡಸು ಶೈಲಿ, ವೈವಿಧ್ಯಮಯ ಪಾತ್ರ ಸೃಷ್ಟಿ, ಕಥಾಹಂದರಗಳ ಮುಖಾಂತರ ಅದ್ಭುತವಾದ ಮತ್ತು ತೀಕ್ಷ್ಣವಾದ ಒಳನೋಟಗಳನ್ನು

ಬಿಡಿಸುತ್ತಾರೆ. ಅವರ ಬರವಣಿಗೆಯ ಸಿದ್ಧಿಯಿರುವುದು ವೈವಿಧ್ಯ ಮತ್ತು ವೈರುಧ್ಯಮಯ ಪಾತ್ರ ಸೃಷ್ಟಿಯಲ್ಲಿ. ಹೀಗೆ ಹೇಳುವಾಗ ಕತ್ತಿಯ ಹರಿತ ಸೂಜಿಯ ಮೊನಚು, ವಜ್ರದ ಕಾಠಿಣ್ಯ ಅವರ ಬರವಣಿಗೆಗೆ ಲಭ್ಯವಾಗುತ್ತದೆ. ಹಿಂದೆಯೇ ಮಾನವೀಯ ಮತ್ತು ಅಂತಃಕರಣದ ಸನ್ನಿವೇಶಗಳನ್ನು ರೂಪಿಸುವಾಗ ಅಷ್ಟೇ ಕೋಮಲ ಮತ್ತು ಸೂಕ್ಷ್ಮತೆಗಳನ್ನು ಚಿತ್ರಿಸಿ ತೋರಿಸುತ್ತಾರೆ.

## ಕಥೆಗಳು

ಒಟ್ಟು ಹತ್ತು ಕಥಾ ಸಂಕಲನಗಳನ್ನು ಕಟ್ಟೀಮನಿ ಪ್ರಕಟಿಸಿದ್ದಾರೆ. ಇವುಗಳಲ್ಲಿ 'ಕಾರವಾನ್' ಮೊದಲನೆಯ ಸಂಕಲನ. ಕಟ್ಟೀಮನಿಯವರಿಗೆ ಪ್ರಸಿದ್ಧಿ ತಂದ ಕಥೆಗಳು ಇದರಲ್ಲಿವೆ. 'ಕಾರವಾನ್' ಮತ್ತು 'ಬರದ ದೇವಿ'. ೧೯೪೨ರ ಆಗಷ್ಟ್ ಚಳುವಳಿಯ ರೀತ್ಯಾ ಅವರು ಜೈಲಿನಲ್ಲಿದಾಗ ಬರೆದ ಮೊದಲ ಕತೆ 'ಬರದ ದೇವಿ'. ೧೯೪೩ರಲ್ಲಿ ಸೆರೆಯಿಂದ ಹೊರಬಂದಾಗ 'ಕಾರವಾನ್' ಕಥೆ ಬರೆದರು. ಭೀಕರ ಬರಗಾಲದ ನಿಮಿತ್ತ ಬದುಕಿಗಾಗಿ ಗುಳೇ ಹೋಗುವ ವಿಜಾಪುರ ಪ್ರದೇಶಗಳ ಗುಳೇಕಾರರ ದಾರುಣ ಸ್ಥಿತಿಯ ವಾಸ್ತವ ಪ್ರಜ್ಞೆ ಇದರಲ್ಲಿ ಚಿತ್ರಿತವಾಗಿದೆ.

ಆಗಷ್ಟ್ ಚಳುವಳಿಯ ಪ್ರಚಂಡ ವಿಪ್ಲವಗಳ ಹುತಾತ್ಮರ ಕುರಿತ ಸಂಕಲನ 'ಆಗಷ್ಟ್ ಒಂಭತ್ತು' ಇದರಲ್ಲಿ ಏಳು ಕಥೆಗಳಿವೆ. ದೇಶಪ್ರೇಮಕ್ಕಾಗಿ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡಿದ ವೀರ, ತ್ಯಾಗ, ಬಲಿದಾನ ಮಾಡಿದ ಉತ್ಸಾಹಿಗಳ ಉತ್ಕಟೇಚ್ಛೆಗಳ ಸಮರ್ಥ ಚಿತ್ರಣ ಈ ಕಥೆಗಳ ಜೀವಾಳವಾಗಿದೆ. ಇದೊಂದು ದೇಶ ಪ್ರೇಮದಕಥೆಗಳ ಗುಚ್ಛ.

ಸಾಮಾನ್ಯ ಭಾವನೆಗಳನ್ನು ಮೆಟ್ಟಿ ನಿಂತು ಅನೇಕ ರೀತಿಯ ಚಿತ್ರ ಹಿಂಸೆಗಳಿಗೆ ಗುರಿಯಾದರೂ ತೀವ್ರವಾದ ನಾಡಪ್ರೇಮ ಹೊಂದಿದ ಜಯಳು ಅನುಭವಿಸುವ ಬಡತನ ಚಿತ್ರ ನಾಡಿನ ಬಹುಜನತೆಯ ಸಂಕೇತವೇ ಆಗಿದೆ. ಶೀಲ- ಅಶ್ಲೀಲ, ಆದರ್ಶ-ವಾಸ್ತವತೆಗಳ ಮಧ್ಯೆಯೂ ಅವಳ ಅಂತರಾಳದಲ್ಲಿ ನಡೆಯುವ ಹೋರಾಟದ ಅಭಿವ್ಯಕ್ತಿ ಶಕ್ತಿಯುತವಾಗಿದೆ. ಹೆಸರಿಗೆ ತಕ್ಕಂತೆಯೇ ಅವಳು ಕಥೆಯಲ್ಲಿ ಜಯ ಸಾಧಿಸುತ್ತಾಳೆ.

'ರಕ್ತಧ್ವಜ' ಅದ್ಭುತವಾದ ಘಟನೆಯೊಂದರ ಸತ್ವಶಾಲಿ ನಿರೂಪಣೆ. ಹತ್ತು ವರ್ಷದ ಕಿಸನ್ನ ನಿರ್ಭೀತಿಯಿಂದ ಕೋರ್ಟಿನ ಗೋಪುರದ ಮೇಲೆ ತ್ರಿವರ್ಣ ಧ್ವಜ ಹಾರಿಸಲು ಹೋಗಿ ಪೋಲೀಸರ ಗುಂಡಿಗೆ ಬಲಿಯಾಗುವ ವೃತ್ತಾಂತ ಇದರ ವಸ್ತು. 'ಹುತಾತ್ಮ' ನರಕ ಸದೃಶವಾದ ಸೆರೆಮನೆಗಳಲ್ಲಿದ್ದು, ತಾಯ್ನಾಡಿಗಾಗಿಯೇ ಪ್ರಾಣತೆತ್ತ ಕ್ರಾಂತಿ ಪುರುಷನೊಬ್ಬನ ಕಥೆ. ಸ್ವಾತಂತ್ರ್ಯ ತಂದುಕೊಟ್ಟ ಸಹಸ್ರಾರು ಮಂದಿಯನ್ನು ಅಲಕ್ಷಿಸಿ ಶ್ರೀಮಂತಿಕೆ ಶಿಖರದಲ್ಲಿ ಉಳಿದು ರಾಷ್ಟ್ರಪ್ರೇಮದ ಬಾಲಿಶತನದೊಂದಿಗೆ ಬದುಕುತ್ತಿದ್ದವರ ಕಂಡು ಕಟ್ಟೀಮನಿ ಕೆರಳಿ ಕೆಂಡವಾದದ್ದರ ವಾಗ್ರೂಪ ಈ ಕತೆ.

'ಜನವರಿ ಇಪ್ಪತ್ತಾರು' ದೇಶಸೇವಕರು ಬಂಧಿಸಲ್ಪಟ್ಟ ಜೈಲುಗಳಲ್ಲಿನ ಹೀನಸ್ಥಿತಿಯ ವಿವರ. ಅಧಿಕಾರಿಗಳ ಅಮಾನುಷ ಕ್ರೌರ್ಯ ಮುಂತಾದ ವಿಕೃತಿಗಳ ಚಿತ್ರಣ.

'ಬಲಿ' ದೇಶಸೇವೆಗಾಗಿ ತನ್ನ ವೈಯಕ್ತಿಕ ಇರವನ್ನೇ ಕಡೆಗಣಿಸಿ 'ಕ್ವಿಟ್' ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದ, ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಮನಸ್ಥೈರ್ಯ ಕಳೆದುಕೊಳ್ಳದೆ ಮೆರೆದು, ಪೋಲೀಸರ ಅತ್ಯಾಚಾರಕ್ಕೆ ಒಳಗಾದ ಬಾಲಕ- ಬಾಲಕಿಯರ ಕಥೆ ಇದಾಗಿದೆ. ತುಂಬ ಹೃದಯಸ್ಪರ್ಶಿಯೂ, ಕಲಾತ್ಮಕವೂ ಆದ ಈ ಕತೆ ಕಟ್ಟೀಮನಿಯವರ ಕೌಶಲ್ಯಕ್ಕೆ ಸಾಕ್ಷಿಯಾಗಿದೆ.

'ಅಜ್ಞಾತವಾಸಿ' ಪ್ರಾಣವಲ್ಲಿ ಪ್ರಾಣವಿಟ್ಟು ಕಾಪಾಡಿದ ಸಾಧ್ವಿ ಹೆಂಡತಿ ನಾಗಮ್ಮನಿಗೆ ಪೋಲೀಸರಿಂದ ಒದಗಿದ ಹೀನಸ್ಥಿತಿ ಕಂಡು ಗಂಡ, ಗಂಡನಿಗಾದ ನೋವನ್ನು ಕಂಡು ಹೆಂಡತಿ ಮರುಗುವ ದುಃಖಾಂತ ಕಥೆ. ರಾಷ್ಟ್ರ ಸ್ವಾತಂತ್ರ್ಯದ ದಿವ್ಯ ಉತ್ಕಟತೆಯಿಂದ ಕುದಿಯುವ ಈ ಕಥೆ ರುದ್ರ ಭೀಕರವಾಗಿದೆ. ಇಲ್ಲಿ ನಾಗಮ್ಮನ ಪಾತ್ರ ತುಂಬ ಜೀವಂತವಾಗಿ ಬಿಂಬಿತವಾಗಿದೆ. ಪೋಲೀಸರಿಂದ ಅತ್ಯಾಚಾರಕ್ಕೊಳಗಾಗಿದ್ದರೂ ಚಕಾರವೆತ್ತದೆ ಇದ್ದವಳು, ಗಂಡನಿಗೆ ಪೋಲೀಸರು 'ಭಂಢ' ಎಂದಾಗ ಕೃಷಳಾಗಿದ್ದೂ ಅವಳು ಕೆರಳಿ-

"ಯಾರಿಗೆ ಭಂಡ ಅಂತಿಯೋ ಷಂಡಾ, ಹೆಂಗಸರ ಮೇಲೆ ಕೈ ಎತ್ತುವ ನಿಮ್ಮಂಥ ಹೇಡಿಗಳಂತಲ್ಲ ನನ್ನ ಗಂಡ ಥೂ. ನಿಮ್ಮ ಮುಖಕ್ಕೆ ಬೆಂಕಿ ಹಾಕಲಿ." ಎನ್ನುವಲ್ಲಿ ಅವಳ ಧೈರ್ಯ ಮೆಚ್ಚುವಂಥದ್ದು. ತನಗೊದಗಿದ ಸ್ಥಿತಿಯ ಪರಿವೇ ಇಲ್ಲದೆ ಪತಿಗಾಗುವ ಅವಮಾನ ಕಂಡು ಕೆರಳುವಲ್ಲಿ ಪತಿಪತ್ನಿಯರ ಅನ್ಯೋನ್ಯತೆ ಕಲ್ಪನೆಗೆ ಬರದೆ ಇರದು. ಕೊನೆಗೆ ಗಂಡನ ತೊಡೆಯ ಮೇಲೆ ಜೀವ ಬಿಡುವ ಈ ಉದಾತ್ತ ದರ್ಶನ ಅವರ ಅನನ್ಯತೆಯನ್ನು ಗ್ರಹಿಕೆಗೆ ತರುತ್ತದೆ. ಬದುಕಿನ ಸೂಕ್ಷ್ಮಗಳನ್ನೆಲ್ಲ ಅರಿತು ಅನುಭವಿಸಿದ ಕಟ್ಟೀಮನಿಯಂಥವರಿಗೆ ಮಾತ್ರ ಇಂತಹ ಒಳನೋಟಗಳನ್ನು ಕೊಡಲು ಸಾಧ್ಯ.

ತಾಯಿ- ಮಗನ ಪ್ರೀತಿ, ಮಮತೆ, ಅತ್ತೆ- ಸೊಸೆಯರ ಮನದ ವೈರುಧ್ಯಗಳ ಸುತ್ತ ಹೆಣೆದ ಕಥೆ 'ಪರಾಜಿತೆ'. ಬಡತನದಿಂದ ವಿಮೋಚನೆ ಬಯಸುವ, ಆ ಮೂಲಕ ಬೆಳಕು (ಸುಖ) ಕಾಣುವ ಆಸೆ ಹೊತ್ತ ಜೀವಿಗಳ ಕಥೆ 'ದೀಪಾವಳಿ ಕತ್ತಲೆ'. ನಾಯಿಗಿಂತಲೂ ನಮ್ಮ ಬಾಳು ಕೀಳು ಎನ್ನುವ ನಿರ್ವಿಣ್ಣ ಸ್ಥಿತಿಯನ್ನು ತೋರಿಸುವ ಕಥೆ 'ಬೂಟ್ ಪಾಲೀಷ್'. 'ಹೊಸವರ್ಷದ ಹಳೆಯ ರಾತ್ರಿ', ಗುಲಾಬಿ ಹೂ', 'ಹೂವಿನ ಹುಡಿಗಿ', 'ಕೊಲೆಪಾತಕಿ', 'ಸತ್ಯವಾನ ಮರಳಲಿಲ್ಲ', 'ಆಕರ್ಷಣೆ', 'ನಾಯಕನ ಮಾನ', 'ಸಂಪಾದಕನ ಕುರ್ಚಿ' ಇಲ್ಲೆಲ್ಲ ಸಮುದಾಯ ಬದುಕಿನ ವಿಕೃತತೆ, ವೈರುಧ್ಯತೆ, ಮನುಷ್ಯ ಸಂಬಂಧಗಳ ಖಾಲೀತನ, ಆಡಂಬರತೆ, ಪ್ರೇಮ-ಕಾಮ, ದ್ವೇಷ-ಆಕ್ರೋಶಗಳಂಥ ಹಲವಾರು ಮುಖಗಳ ಸೂಕ್ಷ್ಮ ಚಿತ್ರಣಗಳನ್ನು ಕಟ್ಟೀಮನಿ ಕೊಡುತ್ತಾರೆ. ಈ ಕಥೆಗಳ

ತುಂಬ ಅವರ ಸುಧಾರಣಪರ ಮತ್ತು ಆಶಾವಾದಿ ಆದರ್ಶವಾದ ಪ್ರಾಮಾಣಿಕ ಪ್ರೇರಣೆಗಳು ಕಾಳಜಿ ಪೂರ್ವಕವಾಗಿ ಕೆಲಸ ಮಾಡಿವೆ.

'ಸೆರೆಯಿಂದ ಹೊರಗೆ', 'ಜೋಳದ ಬೆಳೆಯ ನಡುವೆ', 'ಸುಂಟರಗಾಳಿ', 'ಸೈನಿಕನ ಹೆಂಡತಿ', 'ಹುಲಿಯಣ್ಣನ ಮಗಳು', 'ಜೀವನ ಕಲೆ' ಮುಂತಾದ ಸಂಕಲನಗಳಲ್ಲಿ ಹಳ್ಳಿಯ ಜೀವನದ ಗಟ್ಟಿ ಅನುಭವಗಳ ತೀಕ್ಷ್ಣ ಪ್ರತಿಕ್ರಿಯೆಯನ್ನು ಕಾಣುತ್ತೇವೆ.

ಕಂಡದ್ದನ್ನು ಕಥೆಯಾಗಿಸುವ ಕಟ್ಟೀಮನಿಯವರ ಸೃಷ್ಟಿ ಕ್ರಿಯೆ ಅನುಪಮವಾದದ್ದು. ಬಾಳಿನ ಸ್ವಚ್ಛಂದ ಅನುಭವಗಳ ಜ್ವಲಂತತೆ ಅವರ ಕಥೆಗಳಲ್ಲಿ ಕೆಲಸ ಮಾಡಿದೆ. ಅಂತೆಯೇ ಅವರ ಬಹಳಷ್ಟು ಕಥೆಗಳು ದಾಂಪತ್ಯದ ಸರಸ- ವಿರಸಗಳೊಂದಿಗೆ ನಡೆದುಕೊಂಡು ಹೋಗುತ್ತವೆ.

ಸ್ವಾತಂತ್ರ್ಯದ ತೀವ್ರ ಹಂಬಲ ಒಂದು ಕಡೆ. ಸ್ವಾತಂತ್ರ್ಯದ ನಂತರದ ಭಾರತದ ದಾರಿದ್ರ್ಯತನದ ವಿಮೋಚನೆಯ ಚಿಂತೆ ಇನ್ನೊಂದೆಡೆ. ಈ ಮಧ್ಯ ಮಾನವ ಸಂಬಂಧಗಳ ಹುಡುಕಾಟ, ಜಗದ್ಗುರುಗಳ ಲಂಪಟತನ, ದುಡಿವ ಕೈಗೆ ಅಧಿಕಾರ ಮುಂತಾದ ವಿವರಗಳನ್ನೊಳಗೊಂಡ ಕಟ್ಟೀಮನಿಯವರ ಕಥೆಗಳು ದಂಪತಿ ಸಂಬಂಧ ಶೈಲಿಯಲ್ಲಿ ಮೂಡಿಬಂದಿವೆ. ಒಂದು ಘಟ್ಟದ ಸಾಮಾಜಿಕ ಮತ್ತು ಸಾಂಸ್ಕೃತಿಕ, ಚಾರಿತ್ರಿಕ ಕೃತಿಯನ್ನು ಕಟ್ಟಿಕೊಡುವಲ್ಲಿ ಈ ಕಥೆಗಳು ತುಂಬಾ ಸಹಾಯಕವಾಗಿವೆ.

## ನಾಟಕ

'ಪಟ್ಟಣದ ಹುಡುಗಿ' ಕಟ್ಟೀಮನಿಯವರು ಬರೆದ ಒಂದೇ ಒಂದು ನಾಟಕ. ಇದು ನಾಲ್ಕು ಅಂಕಗಳನ್ನೊಳಗೊಂಡಿದೆ. 'ಸರೋಜ' ಎಂಬ ಪಟ್ಟಣದ ಹುಡುಗಿ ಹಳ್ಳಿಯ ಬಗ್ಗೆ ಇಟ್ಟುಕೊಂಡ ತಪ್ಪು ಕಲ್ಪನೆ, ಆಮೇಲಿನ ಅವಳ ಬದುಕು ಅನಿವಾರ್ಯವಾಗಿ ಹಳ್ಳಿಯಲ್ಲಿಯೇ ರೂಪಗೊಳ್ಳಲು ಸಜ್ಜಾದಾಗ ಅಲ್ಲಿನ ಪರಿಸರಕ್ಕೆ ಅವಳು ಹೊಂದಿಕೊಳ್ಳಲು ತಡವರಿಸುವ,ಕೊನೆಗೂ ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡು ಕೂಡಿ ಬದುಕುವ ವಸ್ತು ನಾಟಕದ ಚೌಕಟ್ಟು.

ಮೊದಲರ್ಧ ಭಾಗದಲ್ಲಿ ಸರೋಜಳ ಪಟ್ಟಣದ ಜೀವನ, ಅದರ ಆಡಂಬರತೆ, ಪಟ್ಟಣದ ಬಗೆಗಿದ್ದ ಅವಳ ಆಕರ್ಷಣೆ, ಸದಾಶಿವನೊಂದಿಗಿನ ಅವಳ ಸಂಬಂಧ, ಟೋಪಿ ಶಾಂತಣ್ಣನ ಅಮಿಷಕ್ಕೆ ಬಲಿಯಾಗಿ ಇಡೀ ಆದರ್ಶಗಳಿಂದ ಕುಸಿಯುವುದು, ಮತ್ತೆ ಹಳ್ಳಿಗೆ ಹಿಂತಿರುಗುವ ಆಶಯಗಳು ಮುಖ್ಯವಾಗಿವೆ.

ಮೊದಲೆ ಹಳ್ಳಿಯೆಂದರೆ ತಾತ್ಸಾರವಿದ್ದ ಅವಳು ಹಳ್ಳಿ ಮನೆಗೆ ಬಂದಾಗ ಅತ್ತಿಗೆ ಪಾರ್ವತಿಯೊಂದಿಗೆ ಜಗಳ ಕಾಯುತ್ತಾಳೆ. ಇದಕ್ಕೆ ಕಾರಣ ಪಾರ್ವತಿ ಹಳ್ಳಿಯ ಮುಗ್ಧ ಹೆಣ್ಣು. ಪಟ್ಟಣದ ಬೆಡಗು ಬಿನ್ನಾಣ ಅವಳಿಗಾಗದು. ಹಾಗಂತ ಪಾರ್ವತಿ ಕೆಟ್ಟವಳಂತಲ್ಲ.

ಸರೋಜಳ ಬಗ್ಗೆ ತುಂಬಾ ಪ್ರೀತಿ. ನಾದಿನಿ ಮದುವೆಯಾಗಿ ಸುಖದಿಂದಿರಬೇಕೆಂಬ ಆಸೆಯುಳ್ಳವಳು. ಕೊನೆಯಲ್ಲಿ ಸರೋಜ ಹಳ್ಳಿಯ ಬದುಕಿಗೆ ಒಗ್ಗಿಕೊಂಡು ಸಂಸಾರ ಮಾಡುವುದನ್ನು ಕಂಡು ಹಿಗ್ಗುವಂಥ ವಿಶಾಲ ಮನೋವೃತ್ತಿಯವಳು.

ಸದಾಶಿವ ಕಲಿತವ, ಆದರ್ಶವಾದಿ ಸುಶೀಲ, ಆದರೆ ನಿರುದ್ಯೋಗಿ, ಜೊತೆಯಲ್ಲಿ ಸರೋಜಳ ಪ್ರೇಮಿ, ಗಂಡ ಕೂಡ. ಟೋಪಿ ಶಾಂತಣ್ಣ ಹೆಸರಿಗೆ ತಕ್ಕಂತೆ ಟೋಪಿ ಹಾಕುವ ವಿಕೃತ ಸ್ವಭಾವದವ. ಇನ್ನುಳಿದ ಪಾತ್ರಗಳಾದ ಚಂಪಾವತಿ, ಮಹಾಲಿಂಗಪ್ಪ, ಶಂಕ್ರಪ್ಪ, ಕಥೆಯಲ್ಲಿ ಅಷ್ಟು ಪ್ರಾಮುಖ್ಯಸಿಗದಿದ್ದರೂ ಕಥೆಯ ಸಂಚಾಲನೆಯನ್ನು ನಿಯಂತ್ರಿಸುತ್ತವೆ, ನಿರಂತರತೆಯನ್ನು ಒದಗಿಸುತ್ತವೆ.

ನಾಲ್ಕು ಅಂಕಗಳಲ್ಲಿ ಎಂಟು ಪಾತ್ರಗಳ ಮೂಲಕ ಕ್ರಿಯಾತ್ಮಕಗೊಳ್ಳುವ ನಾಟಕ ಮನುಷ್ಯ ಸ್ವಭಾವದ ಚಾರಿತ್ರ್ಯಗಳನ್ನು ತುಂಬಾ ನಾಜೂಕಾಗಿ ಕಟ್ಟಿಕೊಡುತ್ತದೆ. ಕಟ್ಟೀಮನಿಯವರ ಇಡೀ ಸಾಹಿತ್ಯದಲ್ಲಿ ಬರುವಂತೆ ದ್ವೇಷ- ಅಸೂಯೆ, ಪ್ರೇಮ-ಕಾಮ, ಬದುಕಿಗಾಗಿ ಪಡುವ ಯಾತನೆ ನಾಟಕದಲ್ಲೂ ಮಾಮೂಲಿಯಾಗಿ ಬಂದಿದೆ. ಇವೆಲ್ಲ ಕಥೆಗೆ ವಾಸ್ತವತೆಯನ್ನು ಕೊಡುವುದರೊಂದಿಗೆ ನಾಟಕಕ್ಕೆ ಪೂರ್ಣತೆಯನ್ನು ಒದಗಿಸಿವೆ. ಸರೋಜಾಳ ಪಾತ್ರವಂತೂ ಇಲ್ಲಿ ತುಂಬ ಮಾರ್ಮಿಕವಾಗಿ ಮೈ ಪಡೆದಿದೆ.

## ಕಾವ್ಯ

'ಕಂಪೋಜಿಟರ್' ಮತ್ತು 'ಸ್ವತಂತ್ರವ್ವ ೩೦' ಇವು ಕಟ್ಟೀಮನಿಯವರ ಎರಡು ಕವನ ಸಂಕಲನಗಳು. ಕಟ್ಟೀಮನಿಯವರ ಬರಹ ಆರಂಭಗೊಂಡದ್ದೇ ಕವನ ರಚನೆಗಳಿಂದ.

ಬಡತನ, ದಾರದ್ರ್ಯದಂಥ ಸಾಮಾಜಿಕ ಕಾಳಜಿಗಳನ್ನೊಳಗೊಂಡ ಸಂಕಲನ 'ಕಂಪೋಜಿಟರ್'. ಇಲ್ಲಿ ಕವಿಯ ಪ್ರತಿಭಟನೆ ಧ್ವನಿಯೊಂದಿಗೆ ಮಾನವೀಯ ಎಳೆಗಳನ್ನು ಕಾಣಬಹುದು.

'ಬುತ್ತಿಯ ಗಂಟು ಬಿಚ್ಚಿ; ರೊಟ್ಟಿಯನ್ನೇ ನುಂಗುತ್ತಾಳೆ.

ಬಡವರ ಕಾಡುತ್ತಿರುವ ಈ ಗೌಡರ ಗೋಣು ಮುರಿದು....'

'ಕುಡಗೋಲು ಕಡಕೊಂಡು

ಧಣ್ಯಾ ನುಂಗಿದಾನ

ನನ ಕೈಯಾಗೇನು ಈಗ ಉಳಿದಿಲ್ಲ'

'ಓಂ ನಮೋ ಬಂದಿರಾದೇವಿ; ಕಾಶ್ಮೀರ ಪುರವಾಸಿನಿ.'

ಬರಗಾಲ, ದಾರಿದ್ರ್ಯ, ಜಮೀನ್ದಾರಿಕೆಯ ಅಟ್ಟಹಾಸ, ಮೇಲಿನ ಪದ್ಯಗಳಲ್ಲಿ ಚಿತ್ರಿತವಾಗಿದೆ. ಆದರೆ ಕವಿ ಹೃದಯ ಇವನ್ನೆಲ್ಲ ಮೆಟ್ಟಿ ನವಸಮಾಜ ನಿರ್ಮಾಣದತ್ತ ಹಂಬಲಿಸುವುದು ಇಲ್ಲಿ ಬಹು ಮುಖ್ಯವಾದ ಅಂಶ.

'ಸ್ವತಂತ್ರವ್ವ -೩೦' ಇದೊಂದು ಗೀತರೂಪಕ. ಇದರಲ್ಲಿ ಕಟ್ಟೀಮನಿಯವರ ಸ್ವಭಾವದ ದ್ವಂದ್ವಗಳನ್ನು ಗುರುತಿಸಬಹುದು. ಕಟ್ಟೀಮನಿಯವರ ವ್ಯಕ್ತಿ ಆರಾಧನೆ ಭಾವುಕ ಭಕ್ತಿಯನ್ನು ಕಾಣುತ್ತೇವೆ. ಸರ್ವಾಧಿಕಾರಿಯಾದ ಇಂದಿರಾ ಪರ ಹೊಗಳಿಕೆಗಳು ಇಲ್ಲಿವೆ. ಸರ್ವಾಧಿಕಾರದ ವಿರುದ್ಧ ಹೋರಾಡಿ ಸಮಾನತೆ ಬಯಸುವ ಇವರು ಪ್ರಧಾನಿ ಇಂದಿರಾಗಾಂಧಿ ಕುರಿತು ಮನದುಂಬಿ ಮಾತನಾಡುವ ಉದಾರತೆಯನ್ನು ತೋರಿಸುವುದು ಸೋಜಿಗವೆನಿಸುತ್ತದೆ.

ಸ್ವತಂತ್ರ ಪೂರ್ವದ ಕಲ್ಪನೆಗಳು ಅನಂತರದ ಭ್ರಮ ನಿರಸನಗಳು, ಗ್ರಾಮ ಬದುಕಿನ ಯಥಾಸ್ಥಿತಿ, ಭೂ ಮಾಲೀಕರ ಹಠಮಾರಿತನ ಹಸಿವು, ಅಜ್ಞಾನಗಳ ಮುಂದುವರಿಕೆಯನ್ನು ಕುರಿತು ಕವಿ ಇಲ್ಲಿ ಪ್ರಮುಖವಾಗಿ ಮಾತಾಡುತ್ತಾರೆ. ಮತ್ತೊಂದೆಡೆ ವ್ಯಕ್ತಿ ಆರಾಧನೆಯ ಅತೀ ಭಾವುಕತೆಯಲ್ಲಿ ಮುಳುಗಿ ಏಳುತ್ತಾರೆ. ಸಮಾನತೆ ಬಯಸಿದರೆ ಮಹಿಳೆಯನ್ನು ಪುರುಷನಿಷ್ಠವಾಗಿ ಚಿತ್ರಿಸುತ್ತಾರೆ. ಹೀಗಾಗಿ ಕಟ್ಟೀಮನಿಯವರ ಸ್ಪಷ್ಟ ಧೋರಣೆಯನ್ನು ಇಲ್ಲಿ ಗುರುತಿಸುವುದು ಸ್ವಲ್ಪ ಕಷ್ಟವೆನಿಸುತ್ತದೆ.

## ಇತರೆ

'ಕುಮಾರ ರಾಮ' 'ಮತ್ತು ಸಂಗೊಳ್ಳಿ ರಾಯಣ್ಣ' ಎಂಬ ಮಕ್ಕಳ ಕಥೆಗಳನ್ನು; 'ನಾನು ಕಂಡ ರಶಿಯಾ' ಎಂಬ ಪ್ರವಾಸ ಕಥನವನ್ನು ಕಟ್ಟೀಮನಿ ಬರೆದಿದ್ದಾರೆ. 'ಪ್ರಿಯದರ್ಶಿನಿ' 'ಮಾರ್ಗದರ್ಶಿನಿ', 'ಸೇನಾಪತಿ ಚೆನ್ನಪ ವಾಲಿ' ಎಂಬ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಇನ್ನೂ ಸಂಪಾದಿತ ಕೃತಿಗಳೆಂದರೆ 'ಗೋಕಾಕ ತಾಲೂಕಿನಲ್ಲಿಯ ಸ್ವಾತಂತ್ರ್ಯ ಸಮರ' (ಭಾವಿಕಟ್ಟಿ ಶಿವಲಿಂಗಪ್ಪನವರಕೂಡ), 'ನವಿಲೂರು ಮನೆಯಿಂದ' (ಕಣವಿಯವರೊಂದಿಗೆ), 'ರಸಿಕ ರಂಗದರ್ಶನ' (ಮಾಧವ ಮಹಿಷಿಯವರೊಂದಿಗೆ) ಎಂಬ ಮೂರು ಕೃತಿಗಳನ್ನು ಸಂಪಾದಿಸಿದ್ದಾರೆ. 'ಕಾದಂಬರಿಕಾರನ ಕಥೆ' ಎಂಬ ಆತ್ಮಚರಿತ್ರೆಯನ್ನು ಕೂಡ ರಚಿಸಿದ್ದಾರೆ.

ಒಟ್ಟು ಕಟ್ಟೀಮನಿಯವರ ಬರವಣಿಗೆ ಲೋಕವನ್ನು ಅವಲೋಕಿಸಿದಾಗ ಅಲ್ಲಿ ಸಹಜ ಮತ್ತು ಕಲಾತ್ಮಕ ಅಂಶಗಳೊಂದಿಗೆ ಆಕ್ರೋಶ ಮತ್ತು ಗಡಸುತನಗಳು ಹೆಚ್ಚಾಗಿ ಕಾಣುತ್ತವೆ. ಕಟ್ಟೀಮನಿಯವರನ್ನು ಸರಿಯಾಗಿ ಗ್ರಹಿಸದವರು ಇದನ್ನು 'ಒರಟುತನ', 'ಹುಂಬತನ' ಎಂದು ಕರೆದದ್ದುಂಟು. ಆದರೆ ಇದು ಒರಟುತನವಲ್ಲ, ಹುಂಬತನವಲ್ಲ. ಅವರು ಬಾಳಿ ಬದುಕಿದ ಸನ್ನಿವೇಶ ಅಂಥದ್ದು. ವಿಷಮ ವ್ಯವಸ್ಥೆಗೆ ಕಾರಣವಾದ 'ಅರ್ಥ' ಮತ್ತು ವರ್ಗ ವ್ಯವಸ್ಥೆಯ ಪರಿವರ್ತನೆಗೆ ಕಾರಣವಾದ ಪ್ರಜ್ಞಾಪೂರ್ವಕ ಮನಸ್ಸು

ಕ್ರಿಯಾಶೀಲವಾದ ಪ್ರಕ್ರಿಯೆಯೆ ಹೊರತು ಪ್ರತಿಗಾಮಿತನ ಇದರಲ್ಲಿಲ್ಲ ಎಂಬುದನ್ನು ಮನಗಾಣಬೇಕು.

### ವಿಮರ್ಶಕರ ದೃಷ್ಟಿಯಲ್ಲಿ ಕಟ್ಟೀಮನಿಯವರ ಸಾಹಿತ್ಯ

ಕಟ್ಟೀಮನಿಯವರ ಕಾದಂಬರಿಯ ವಿಶೇಷತೆಯಿರುವುದು ವಾಸ್ತವತೆಯನ್ನು ವಿದ್ರೂಪಗೊಳಿಸದೆ ವಿಭಿನ್ನವಾಗಿ ಚಿತ್ರಿಸುವುದರಲ್ಲಿ ಮತ್ತು ಮುಗ್ಧ ಮತ್ತು ಭಾವುಕತನಗಳನ್ನು ಆಕೃತಿಗಿಳಿಸುವಲ್ಲಿ ಈ ಕಾರಣಕ್ಕಾಗಿ ಬಹಳ ಜನ ವಿಮರ್ಶಕರು ಇವರನ್ನು ಭಾವುಕ ಭಕ್ತರನ್ನಾಗಿ ಚಿತ್ರಿಸಿದ್ದಿದೆ. ಕವಿಯಾಗಿ ತೋರುವ ತೀವ್ರ ಭಾವುಕತೆಯು ಕಥೆಗಾರನಾಗಿಯಾಗಲೀ, ಕಾದಂಬರಿಕಾರರಾಗಿಯಾಗಲೀ ತೋರುವುದಿಲ್ಲ. ಕೃತಿಗಳಲ್ಲಿ ಭಾವನೆಗಳ ತೀವ್ರತೆ ಇದ್ದರೂ ಭಾವುಕವಾಗದ ನಿಯಂತ್ರಣಗುಣ ಕಂಡುಬರುತ್ತದೆ. (ಜ್ವಾಲಾಮುಖಿಯ ಮೇಲೆ ಮತ್ತು ಮಾಡಿ ಮಡಿದವರು ಕೃತಿಯ ರತ್ನ- ಚಂದ್ರು, ಹೇಮಾ- ವಿಶ್ವನಾಥ ಈ ಪಾತ್ರಗಳಲ್ಲಿ ನಾವು ಇದನ್ನು ಸ್ಪಷ್ಟವಾಗಿ ಗುರುತಿಸಬಹುದು).

ರಾಜಕೀಯ ನಾಯಕರ ಬೂಟಾಟಿಕೆ, ಧಾರ್ಮಿಕ ಗುರುಗಳ ಡಂಭಾಚಾರ, ಜನರ ದಾರಿದ್ರ್ಯಗಳ ಮೇಲೆ ನಡೆಯುವ ಮೋಸ, ಅನ್ಯಾಯ, ಅತ್ಯಾಚಾರ, ಕ್ರೌರ್ಯಗಳಂತೆ ಬದುಕಿನ ದ್ವಂದ್ವಗಳ ಸೂಕ್ಷ್ಮ ಗ್ರಹಿಕೆಯನ್ನೇ ಕಟ್ಟೀಮನಿಯವರ ಕೃತಿಗಳಲ್ಲಿ ಕಾಣಬಹುದು. ಇಂಥ ಸನ್ನಿವೇಶಗಳನ್ನು ನಿರೂಪಿಸುವಾಗ, ವಿನ್ಯಾಸಗೊಳ್ಳುವ ಪಾತ್ರ ಸೃಷ್ಟಿ, ಬಳಸಿಕೊಳ್ಳುವ ಗಡಸು ಶೈಲಿ, ಕಥೆ ನಡೆಸುವ ತಂತ್ರ ಎಲ್ಲವೂ ವೈವಿಧ್ಯಪೂರ್ಣವೂ ವೈರುಧ್ಯಮಯವೂ ಆದಂಥದ್ದು. ಕೃತಿಯಲ್ಲಿ ಆಕೃತಿಗೊಳ್ಳುವ ಈ ವೈವಿಧ್ಯ ಮತ್ತು ವೈರುಧ್ಯತೆ ಅದ್ಭುತವಾದ ತೀಕ್ಷ್ಣ ಒಳನೋಟಗಳನ್ನು ಹಿಡಿಯುವಲ್ಲಿ ಸಾಫಲ್ಯ ಪಡೆಯುತ್ತದೆ. ಈ ರೀತಿಯ ಮಾತಿಗೆ ಡಾ. ಎಚ್.ಎಸ್.ರಾಘವೇಂದ್ರರಾವ್ ಅವರ ಅಭಿಪ್ರಾಯ ಪೂರಕವೆನಿಸುತ್ತದೆ.

> "ಕಟ್ಟೀಮನಿಯವರ ಕಾದಂಬರಿಲೋಕ.... ಅದು..... ಮುಗ್ಧತೆ ಮತ್ತು ವಾಸ್ತವತೆಗಳ ನಡುವಿನ ಮುಖಾಮುಖಿಯ ಲೋಕ. ವಾಸ್ತವವನ್ನು ವಿರೂಪಗೊಳಿಸದೆ ಚಿತ್ರಿಸಬೇಕೆಂಬ ರೊಚ್ಚಿನ ಬಗಲಲ್ಲೇ ತನ್ನ ಕುಂದು ಕೊರತೆಗಳ ಬಗ್ಗೆಯೂ ಸದಾ ಕೊರಗುವ ದೃಷ್ಟಿಕೋನ ಅಲ್ಲಿನದು (೧೯೯೦-೨೮).

ಕಟ್ಟೀಮನಿಯವರ ಬರವಣಿಗೆಗೆ ಈ ಮಾತು ತೀರ ಪ್ರಸ್ತುತವೆನಿಸುತ್ತದೆ. ತತ್ವಸಿದ್ಧಾಂತಗಳ ಗೋಜಲು ಇಲ್ಲದೆ ಅನುಭವ ವೇದ್ಯವಾದದ್ದನ್ನು, ಸತ್ಯವೆನಿಸಿದ್ದನ್ನು ಖಚಿತವಾಗಿ, ನಿರ್ಭಿಡೆಯಿಂದ ಹೇಳುವುದು, ಅವರ ಬರವಣಿಗೆಯ ಮೂಲಸ್ಥಾಯಿ. ಇದು 'ಕಟ್ಟೀಮನಿ'ಯವರ ರಕ್ತಗತ ಗುಣ.

ಈ ಹಿನ್ನೆಲೆಯಲ್ಲಿ ವಿವಿಧ ವಿಮರ್ಶಕರ ದೃಷ್ಟಿಯಲ್ಲಿ ಕಟ್ಟೀಮನಿಯವರ ಕೃತಿಗಳು ಪಡೆದ ಅವಿಷ್ಕಾರಗಳನ್ನು ಪರಿಭಾವಿಸಬಹುದು.

೧

ಕಟ್ಟೀಮನಿಯವರ ಆತ್ಮಕಥನಾತ್ಮಕ ಕಾದಂಬರಿಗಳನ್ನು ಮೊದಲಿಗೆ ಇಲ್ಲಿ ವಿವೇಚಿಸುವುದು ಸೂಕ್ತವೆನಿಸುತ್ತದೆ. ಈ ಪ್ರಜ್ಞೆಯ ಕಾದಂಬರಿ ಅವರ ಮೊದಲ ಪ್ರಯತ್ನಗಳೂ ಕೂಡ ಆಗಿದ್ದುದೂ ಅಲ್ಲದೆ ಗಾಢ ರಾಷ್ಟ್ರ ಪ್ರೇಮದಿಂದ ಪ್ರೇರಿತವಾದಂಥವು.

'ಸ್ವಾತಂತ್ರ್ಯದೆಡೆಗೆ' ಇವರ ಮೊಟ್ಟಮೊದಲ ಕಾದಂಬರಿ (೧೯೪೬). ಈ ಕಾದಂಬರಿ ಬಗೆಗೆ ತುಂಬ ಪಾರ್ಶ್ವಿಕವಾದ ಗ್ರಹಿಕೆಗಳು ಕಂಡುಬರುತ್ತವೆ. 'ಸ್ವಾತಂತ್ರ್ಯದೆಡೆಗೆ' ಭಾರತದ ಸ್ವಾತಂತ್ರ್ಯಪೂರ್ವ ಸ್ಥಿತಿಯನ್ನು ಚಿತ್ರಿಸುವುದರೊಂದಿಗೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಪ್ರಚೋದನೆ ನೀಡಿದ ಕೃತಿ ಎಂಬುದು ಒಂದು ಸರಳವಾದ ಗ್ರಹಿಕೆ ಇದೆ. ಇಲ್ಲಿ ಪ್ರಶ್ನೆ ಬರುವುದು ಯಾವ ರೀತಿ ಸ್ವಾತಂತ್ರ್ಯ? ಯಾರಿಗೆ? ಎಂಬುದು. ಆದರೆ ಲೇಖಕರು ಕೃತಿಯಲ್ಲಿಟ್ಟ ಆದರ್ಶ ಇಂದಿಗೂ ಶೂನ್ಯ ಸ್ಥಿತಿಯಲ್ಲಿದ್ದದ್ದು ನಗ್ನಸತ್ಯ. ಬಹುಪಾಲು ಜನತೆ ಇನ್ನೂ ತನ್ನ ಹಕ್ಕಿಗಾಗಿ, ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಪರಿತಪಿಸುತ್ತಲೆ ಇದ್ದಾರೆ.

ಗಾಂಧೀಜಿಯವರ 'ಪೂರ್ಣ ಸ್ವಾತಂತ್ರ್ಯ'ದ ಕಲ್ಪನೆಯಿಂದ ಪ್ರೇರಿತನಾದವ ಯುವಕ ಶೇಖರ. ರಾಜಕೀಯ ಸ್ವಾತಂತ್ರ್ಯವೆನ್ನುವುದು ಈ ಪೂರ್ಣ ಸ್ವಾತಂತ್ರ್ಯದ ಒಂದು ಭಾಗ ಮಾತ್ರ. ಇದು ಗಾಂಧೀಜಿಯವರ ಪರಿಕಲ್ಪನೆ ಕೂಡ ಹೌದು. ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಬರುವುದರೊಂದಿಗೆ ಸಮತಾವಾದವೂ ಬರಬೇಕು. ಅಜ್ಞಾನ ಅಸಮತೆಗಳಂಥ ವಿಷಯ ವ್ಯವಸ್ಥೆಯಿಂದ ಜನ ಮುಕ್ತರಾಗಬೇಕು. ಬರೀ ರಾಜಕೀಯ ಸ್ವಾತಂತ್ರ್ಯ ಅರ್ಥಹೀನ ಎನ್ನುವ ಸತ್ಯವನ್ನು ತಿಳಿದವ ಶೇಖರ. ಗ್ರಾಮಾಭಿವೃದ್ಧಿ ಆತನ ಕನಸಿನ ಕೂಸು. ಸಮಸ್ಯೆಯ ಆಳಕ್ಕಿಳಿದು ಚಿಂತಿಸುವ ಪ್ರವೃತ್ತಿಯವ. ದೇಶ ಸೇವೆಯ ಹೆಸರಿನಲ್ಲಿ ಸ್ವಾರ್ಥ ಸಾಧಿಸುವ ಮುಖಂಡರ ಕುರಿತು ಅಸಹನೆ ಹೊಂದಿದವ. ಅವರ ಕೊಳಕುತನಗಳನ್ನು ಸರಳ ಹೃದಯದ ರೈತ ಸಮುದಾಯಕ್ಕೆ ಬಗೆದು ತೋರಿಸಲು ಹಳ್ಳಿಹಳ್ಳಿಗಳಲ್ಲಿ ಸಂಘಟನೆ ಮಾಡಿ ಅವರ ಹಕ್ಕು ಬಾಧ್ಯತೆಗಳ ಅರಿವು ಮೂಡಿಸುವ ದಿಟ್ಟ.

ಶೇಖರ ತನ್ನ ಈ ಆದರ್ಶಗಳನ್ನು ಕಾಮ್ರೆಡ್ 'ರಾಜ'ನಲ್ಲಿ ಪ್ರಸ್ತಾಪಿಸಿದಾಗ 'ರಾಜ' ಈತನನ್ನು ಪರಿಹಾಸ್ಯ ಮಾಡುತ್ತಾನೆ. ಕೂಲಿಕಾರರ ಮತ್ತು ಅವರ ನೆಲೆಯ ಪಟ್ಟಣಗಳನ್ನು ತನ್ನ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡ ರಾಜ-

'ಆ ಕೊಂಪೆಯಲ್ಲಿ ಯಾರಿದ್ದಾರು ಹೋಗೋ' ಎನ್ನುವಲ್ಲಿ ಹಳ್ಳಿಗಳ ಮತ್ತು ಗಾಂಧೀವಾದದ ಬಗೆಗಿನ ತಿರಸ್ಕಾರಗಳನ್ನು ಗುರುತಿಸಬಹುದು. "ಇದ್ದೀರಲ್ಲಾ ನಿಮ್ಮಂಥವರು ಗಾಂಧೀಮರಿಗಳು, ಆ ಮಹಾತ್ಮನ ಚೇಲಾ ಆಗು ಹೋಗು. ನಿಮ್ಮಿಂದ ಹಳ್ಳಿ ಉದ್ಧಾರ ಆಗತೈತಿ. ನಿಮ್ಮ ಗ್ರಾಮೋದ್ಯೋಗ, ನಿಮ್ಮ ರಾಟಿ, ನಿಮ್ಮ ತಕಲಿ, ನಿಮ್ಮ ನೂಲು....." ಗಾಂಧೀವಾದ ಮತ್ತು ಕಮುನಿಸ್ಟ್ ವಾದಗಳ ಮುಖಾಮುಖಿಯನ್ನು ಇಲ್ಲಿ ಕಾಣಬಹುದಾಗಿದೆ.

ಕೃತಿಯನ್ನು ಕಮ್ಯುನಿಸ್ಟ್ ಧೋರಣೆಗಳ ಹಿನ್ನೆಲೆಯಲ್ಲಿ ನಿರ್ವಹಿಸಿಕೊಳ್ಳುವ ಅಶೋಕ ಶೆಟ್ಟರ ಅವರು-

"ಈ ಕೃತಿಯ ಕೊರತೆ ಎಂದರೆ ಉಡಾಫೆ ಮಾತಾಡುವ ಮೂದಲಿಸುವ ಪಾತ್ರದ ಬದಲು ಓರ್ವ ಪ್ರಾತಿನಿಧಿಕ ಗಂಭೀರ ಕಮುನಿಸ್ಟನ ಪಾತ್ರ ಚಿತ್ರಿಸಿದ್ದರೂ ಇಲ್ಲ ಪ್ರಸ್ತಾವಗೊಳ್ಳುವ ವಿಚಾರ ಚಿಂತನ, ಮಂಥನ ಪೃಥಕ್ಕರಣ ಸಾಧ್ಯವಿತ್ತೆಂಬುದು ವೈಯಕ್ತಿಕ ನೆಲೆಯ ಬೇಜವಾಬ್ದಾರಿ ಪ್ರತಿಕ್ರಿಯೆಗಳಿಗೆ ಬದಲಾಗಿ ಒಂದು ಮೂರ್ತ ಸಾಮಾಜಿಕ - ರಾಜಕೀಯ ಸನ್ನಿವೇಶದ ಕುರಿತು ಕಮ್ಯುನಿಸ್ಟ್ ಪಕ್ಷದ Programmatic ಗ್ರಹಿಕೆ ನೆಲೆಯಲ್ಲಿ ರಾಜ ಗಂಭೀರವಾಗಿಯೇ ಈ ವಿಷಯಗಳನ್ನು ಚರ್ಚಿಸುವಂತೆ ಚಿತ್ರಿಸಿದ್ದರೆ, ಕಟ್ಟೀಮನಿಯವರಲ್ಲಿದ್ದ ವಿಚಾರಗಳ ಪ್ರತಿಪಾದನೆ, ಇನ್ನೂ ಹೆಚ್ಚು ಪಕ್ವವಾಗಿ ಪ್ರಬುದ್ಧವಾಗಿ ಸಾಧ್ಯವಾಗುತ್ತಿತ್ತು (೧೯೯೨:೭). ಈ ವಿಚಾರಗಳ ಹಿನ್ನೆಲೆಯಲ್ಲಿ ಮತ್ತು ಕೃತಿಯ ಆಶಯದ ನೆಲೆಯಲ್ಲಿ ಆರೋಪಿಸಿದಾಗ ಪ್ರಸ್ತುತ ಕಾದಂಬರಿಯಲ್ಲಿ ಕಟ್ಟೀಮನಿಯವರ ಕಮ್ಯುನಿಸ್ಟ್ ಧೋರಣೆಗಳ ಬಗೆಗಿನ ಅಸ್ಪಷ್ಟ ನಿಲುವುಗಳು ಗೋಚರವಾಗುತ್ತವೆ."

ಕಾದಂಬರಿಯ ಒಳಗೆ ಗ್ರಾಮೀಣ ರೈತರು ಮತ್ತು ನಗರದ ಕೂಲಿಕಾರರ ಮಧ್ಯ ಬಿರುಕು ಇದೆ. ಇವೆರಡು ವಿರುದ್ಧ ದೈವಗಳು ಎನ್ನುವ ಆಶಯ ಕೆಲಸಮಾಡಿದೆ. ಸ್ವಭಾವತಃ ಆರ್ಥಿಕ ಹಿನ್ನೆಲೆಯಲ್ಲಿ ಇವೆರಡೂ ಭಿನ್ನ ನೆಲೆಗಳೇನಲ್ಲ. ಪರಸ್ಪರ ಪೂರಕವಾದಂಥವು. 'ಜ್ವಾಲಾಮುಖಿಯ ಮೇಲೆ' ಕಾದಂಬರಿಯಲ್ಲಿ ಈ ತರದ ಗೊಂದಲಗಳಿಗೆ ನಿವಾರಣೆ ದೊರೆತು ಒಂದೇ ನೆಲೆಯಲ್ಲಿ ಅವು ಹುರಿಗೊಂಡಿದ್ದನ್ನು ಕಾಣುತ್ತೇವೆ.

ಸ್ವಾತಂತ್ರ್ಯ ಸಮರ, ಸಮಾನತೆ ತತ್ವ, ಕಾದಂಬರಿಯ ಕಥಾ ವಸ್ತುವಾದರೂ ಬಹು ಸಂಖ್ಯಾತ ಬಡವರ ಕಾಳಜಿ ಕಾದಂಬರಿಯ ಮೂಲ ಸ್ಥಾಯಿ. ಈ ಕಳಕಳಿ ಕೇವಲ ಅನುಕಂಪದ್ದಲ್ಲ. ಆತ್ಮೀಯವಾದದ್ದು. ಅನುಭವ ಮೂಲವಾದದ್ದು.

ಕಾದಂಬರಿ ಸ್ವಾತಂತ್ರ್ಯದ ಘೋಷಣೆ, ಹೋರಾಟ ಭಾಷಣದ ಮೂಲಕ ಶುರುವಾಗುತ್ತದೆ. ಇದಕ್ಕೆ ಮೂಲ ಕಾರಣರಾದ ಗಾಂಧೀ, ನೆಹರು, ಆಝಾಧ್ ಮುಂತಾದ ಧುರೀಣರನ್ನು ಬಂಧಿಸುವುದರೊಂದಿಗೆ, ಚಳುವಳಿ ತೀವ್ರ ಸ್ವರೂಪವನ್ನು ಪಡೆದುಕೊಂಡು ಮುಕ್ತಾಯವಾಗುತ್ತದೆ.

ಎರಡನೆ ಕಾದಂಬರಿ 'ಮಾಡಿ ಮಡಿದವರು'. ನಲವತ್ತೆರಡರ ಚಳುವಳಿಯ ಆಮೂಲಾಗ್ರ ವಸ್ತು. ಕಾದಂಬರಿಯ ಸಂವಿಧಾನ ರಾಜಕೀಯ ಕಾದಂಬರಿಗಳು ಎಂಬ ತಮ್ಮ ಲೇಖನದಲ್ಲಿ ಅಶೋಕ ಶೆಟ್ಟರ ಅವರು "ಚಳುವಳಿ ಹಿಂಸಾತ್ಮಕವಾಗಿರಬೇಕೆ, ಅಹಿಂಸಾತ್ಮಕವಾಗಿರಬೇಕೆ ಎಂಬ ಚರ್ಚೆ ಇಲ್ಲಿ ಪ್ರಾಮುಖ್ಯತೆ ಪಡೆಯುವದೊಂದನ್ನೇ ಬಿಟ್ಟರೆ ರಾಜಕೀಯ ವಿಚಾರ ದೃಷ್ಟಿಗಳ ಚಿಂತನೆ ಇದರಲಿಲ್ಲ (೧೯೯೨:೧೦).

> "ನಲವತ್ತೆರಡರ ಚಳುವಳಿಯ ತೀಕ್ಷ್ಣತೆ, ತೀವ್ರತೆ, ಆವೇಶ, ತ್ಯಾಗಗಳ ಪರಿಪೂರ್ಣಚಿತ್ರ ಮೂಡಿದೆ. ಆದರೆ ಈ ಚಳುವಳಿಯ ವೈಶಾಲ್ಯದ ಕಲ್ಪನೆ ತಕ್ಕಷ್ಟು ಬರುವುದಿಲ್ಲ. ಅದರ ಸಾರ್ವತ್ರಿಕತೆ ಸಾಮೂಹಿಕತೆ ಚಿತ್ರ ಸ್ಪಷ್ಟವಾಗಿ ಮೂಡಿಲ್ಲ"

ಎಂದು 'ಗೋಪಾಲಕೃಷ್ಣ ಅಡಿಗ' ಅವರು ಕಟ್ಟೀಮನಿಯವರಿಗೆ ಬರೆದ ಪತ್ರದಲ್ಲಿ ಹೇಳುತ್ತಾರೆ. (ದಿನಾಂಕ ೨೯-೨-೧೯೫೦) - (ಉದ್ಧೃತ: ಕಾದಂಬರಿಕಾರನ ಕಥೆ ೧೯೮೧: ೩೬೬)

ಮೇಲಿನ ಇಬ್ಬರು ವಿಮರ್ಶಕರ ಮಾತನ್ನು ಪರಿಭಾವಿಸಿದಾಗ ಕಾದಂಬರಿಯ ತಾತ್ವಿಕ ಚೌಕಟ್ಟಿನಲ್ಲಿ ದ್ವಂದ್ವಗಳನ್ನು ಕಾಣುತ್ತೇವೆ. ವರ್ಗ ವೈಷಮ್ಯಗಳ ಸಂಕೀರ್ಣ ಸಮಸ್ಯೆಗಳಿಗಿಂತ ಕ್ರಾಂತಿಯ ಬೇಕು ಬೇಡಿಕೆಗಳ ಚರ್ಚೆಯೇ ಎದ್ದುಕಾಣುತ್ತದೆ.

ಆದರೂ ಕಾದಂಬರಿಯ ಕೊನೆಯಲ್ಲಿ ಅಹಿಂಸಾತ್ಮಕ, ಘಟನೆಗಳು ಸಂಭವಿಸುವುದರಿಂದ ಇದು ಗ್ರಹಿಕೆಗೆ ಭಿನ್ನ ನೆಲೆಯನ್ನು ಒದಗಿಸುತ್ತದೆ. ಬ್ರಿಟಿಷರ ವಿರುದ್ಧ ರಾಜಕೀಯ ಹೋರಾಟ ಅಹಿಂಸಾತ್ಮಕವಾಗಿರಬೇಕಿತ್ತೆ? ಇದು ಅನಿವಾರ್ಯವಾಗಿತ್ತೆ? ಎನ್ನುವ ಸಂದಿಗ್ಧಗಳನ್ನು ಎಬ್ಬಿಸುತ್ತದೆ.

ಕ್ರಾಂತಿಯ ನಂತರವೇ ಶಾಂತಿಯ ಕೂಸು ಹುಟ್ಟುವುದು ಎಂಬ ಸಹಜತೆಯನ್ನು ಒಪ್ಪಿಕೊಂಡಾಗ ನಮ್ಮ ಹಕ್ಕುಗಳಿಗಾಗಿ ನಾವು ಹೋರಾಡುವಾಗ, ಬಿಟ್ಟು ಕೊಡದ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಹಿಂಸೆ ಅನಿವಾರ್ಯವೆನಿಸುತ್ತದೆ. ಹಾಗೆ ಇಲ್ಲಿನ ಪಾತ್ರಗಳು ಕೂಡ ಸ್ವಭಾವತಃ ಅಹಿಂಸಾ ಪ್ರವೃತ್ತಿಯವೂ ಅಲ್ಲ ಹಾಗೆ ಹಿಂಸಾ ಪ್ರವೃತ್ತಕವೂ ಅಲ್ಲ. ತಮ್ಮ ಕಾರ್ಯ ಚಟುವಟಿಕೆಗಳಿಗೆ ಅಡ್ಡಿಯುಂಟುಮಾಡುವ ಸರಕಾರದ ನಿಷ್ಕ್ರಿಯತೆ ಅವುಗಳ ಗುರಿ. ಅದಕ್ಕಾಗಿ ವಿಧ್ವಂಸಕ ಕೃತಿಗಿಳಿಯುತ್ತವೆ. ಸಂರಕ್ಷಣೆಗೆ ಶಸ್ತ್ರ ಹಿಡಿಯುತ್ತವೆ.

ಈ ಹಿಂಸೆಯ ಕಲ್ಪನೆ ಬಗ್ಗೆ ಆರ್.ಕೆ. ಮಣಿಪಾಲ ಅವರು 'ಬ್ರಿಟಿಷ್ ಸತ್ತೆಯನ್ನುರುಳಿಸಲು ಗಾಂಧಿವಾದಿಗಳಾದ ಹಳ್ಳಿಗರು ಬಂದೂಕು ಎತ್ತುವುದು ತಪ್ಪೇನಲ್ಲ. ಅದು ಅವರ ಜೀವನದ ಸನ್ನಿವೇಶಗಳೇ ಕಲಿಸಿದ ಪಾಠವಾಗಿದೆ. ಅದರೊಟ್ಟಿಗೆ ಗಾಂಧೀವಾದದ ಅರ್ಥಪೂರ್ಣ ವಿಮರ್ಶೆಯೂ ಹೌದು ( ೧೯೮೮:೧೪) ಎನ್ನುತ್ತಾರೆ. ಲೇಖಕರು ಇಲ್ಲಿ ಹಿಂಸೆಯ ಬಗ್ಗೆ ತಲೆಕೆಡಿಸಿಕೊಳ್ಳದೆ ಅದು ಹಕ್ಕು ಎಂದು ಪ್ರತಿಪಾದಿಸುವುದು ಬಹು ಮುಖ್ಯವಾಗಿದೆ.

ವರ್ಗ ಮತ್ತು ವರ್ಣ ಸಂಘರ್ಷದ ಕಲ್ಪನೆಯಿಂದ ಕಾದಂಬರಿಯನ್ನು ನಿರ್ವಹಿಸುವ ಆರ್.ವಿ.ಭಂಡಾರಿಯವರು -

"ಕಟ್ಟೀಮನಿಯವರ ಕಾದಂಬರಿಗಳಲ್ಲಿ 'ಮಾಡಿ ಮಡಿದವರು' ಗೆ ವಿಶಿಷ್ಟ ಸ್ಥಾನವಿದೆ.

೧೯೪೨ರ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಹೋರಾಟವನ್ನು ಆಧರಿಸಿದ ಈ ಕಥೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗ್ರಾಮೀಣ ಯುವಕರು, ವಿದ್ಯಾರ್ಥಿಗಳು, ಹಿರಿಯರು, ಹೆಂಗಸರು, ರೈತರು ತೊಡಗಿಕೊಂಡ ಒಂದು ವೀರಗಾಥೆಯಾಗಿದೆ. ಅದರೊಟ್ಟಿಗೆ ರೈತರ ರಾಜಕೀಯ ಪ್ರಜ್ಞೆ ಗಾಂಧೀವಾದದ ಮಿತಿ, ಕಾಂಗ್ರೆಸ್ಸಿಗರ ಸೋಗಲಾಡಿತನ ಇವೆಲ್ಲವನ್ನೂ ಒಪ್ಪವಾಗಿ ಚಿತ್ರಿಸುತ್ತದೆ. ಮುಖ್ಯವಾಗಿ ಕಟ್ಟೀಮನಿಯವರ ಇತರ ಕೃತಿಗಳಲ್ಲಿ ಸಂಘಟಿಸದ ಎಲ್ಲಿಲ್ಲದ ಕಲಾತ್ಮಕ ಪ್ರಮಾಣಬದ್ಧತೆ ಈ ಕಾದಂಬರಿಯಲ್ಲಿ ಸಂಬಂಧಿಸಿದೆ" (೧೯೯೩:೨೯೦).

ಭಂಡಾರಿಯವರ ಮೇಲಿನ ಮಾತು ತುಂಬಾ ವೈಭವೀಕೃತ ವಿವರಣೆ ಎನಿಸುತ್ತದೆ. ಆದರೂ ಕೂಡ ಇದರ ಹಿಂದಿರುವ ವರ್ಗ ಸಂಘರ್ಷವನ್ನು ಗುರುತಿಸುವ ಭಂಡಾರಿಯವರ ಕಾಳಜಿ ಗಮನಿಸುವಂಥದ್ದು. ಹೇಮಾ, ವಿಶ್ವನಾಥ, ಶೇಖರರ ಪಾತ್ರಗಳನ್ನು ತುಂಬಾ ವಿಮರ್ಶಾತ್ಮಕ ಹಿನ್ನೆಲೆಯಲ್ಲಿ ಗ್ರಹಿಸುತ್ತಾರೆ.ಈ ಮೂಲಕ ವರ್ಗ ಹೋರಾಟದ ಸಂದರ್ಭದ ಲೈಂಗಿಕ ಶಿಸ್ತನ್ನು, ಸಂಯಮತೆಯನ್ನು ಗುರುತಿಸುತ್ತಾರೆ. ಹೇಮಾ ಮತ್ತು ವಿಶ್ವನಾಥ ಪಾತ್ರಗಳನ್ನು ಉಜ್ವಲವಾಗಿ ಚಿತ್ರಿಸುತ್ತಾರೆ.

ಕಾದಂಬರಿ ಉದ್ದಕ್ಕೂ ಎರಡು ಧಾರೆಗಳಲ್ಲಿ ಹರಿದು ಬರುತ್ತದೆ. ಒಂದು ಕಡೆ ವಸಾಹತುವಿನ ನಿರಾಕರಣೆ, ಆ ಪ್ರಯುಕ್ತ ದೇಶೀಯತೆ ಉಳಿಸಿಕೊಳ್ಳಲು ಸ್ವಾತಂತ್ರ್ಯವನ್ನು ಗಳಿಸಲು ರಚನಾತ್ಮಕ ಕ್ರಿಯಾಚಟುವಟಿಕೆಗಳನ್ನು ಕೈಗೊಳ್ಳುವ ದೇಶಾಭಿಮಾನಿಗಳು. ವಸಾಹತುಶಾಹಿತ್ವವನ್ನು ತಲೆಮೇಲಿಟ್ಟುಕೊಂಡು ನಿಷ್ಠರಾಗಿ ತಮ್ಮ ವರ್ಗ ಹಿತಾಸಕ್ತಿಗಳನ್ನು ಭದ್ರವಾಗಿಸಿಕೊಳ್ಳುವ, ಆ ಮೂಲಕ ಸ್ವಜನ ದ್ರೋಹಕ್ಕಿಳಿಯುವ ತನ್ನ ಮುಂದುವರಿಕೆಯನ್ನು ಗಟ್ಟಿಗೊಳಿಸಿಕೊಳ್ಳುವ, ಬಾಬಾಸಾಹೇಬ, ದೇಸಾಯಿ ಸೂರನ ಗೌಡ, ಕೀರ್ತಿನಾಥ, ಇವರಂಥವರು ಇನ್ನೊಂದು ಕಡೆ ಇದ್ದಾರೆ. ಈ ಎರಡು ವರ್ಗದ ಧೋರಣೆಯ ಮೇಲೆ ನಡೆಯುವ ಹಿಂಸಾತ್ಮಕ ಕ್ರಿಯೆಗಳು, ಅಧಿಕಾರದ ವಿರುದ್ಧದ ಚಳುವಳಿಗಳು, ಆದರ್ಶಗಳು, ಕಾಂಗ್ರೆಸ್ಸಿನ ಗೋಸುಂಬಿತನ, ಮುಂತಾದವು ಕಾದಂಬರಿಯ ಉದ್ದಕ್ಕೂ ಬೆಳೆದು ಬಂದಿವೆ.

ಕಾದಂಬರಿಯಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಗಾಂಧಿವಾದ ಮತ್ತು ಸಮತಾವಾದದ ತಾಕಲಾಟಗಳು. ಮಾರ್ಕ್ಸ್‌ವಾದದ ಪ್ರಭಾವ ಪ್ರೇರಣೆಗಳು.

ಸ್ವಾತಂತ್ರ್ಯ ಸಿಕ್ಕರೂ ಜನತೆಗೆ ಆರ್ಥಿಕ ಸ್ವಾತಂತ್ರ್ಯ ಲಭಿಸಿಲ್ಲ. ರೈತ, ಕೂಲಿಕಾರ, ಬಡವರನ್ನು ಈ ಬವಣೆಯಿಂದ ಬಿಡಿಸುವದು ಕಾಂಗ್ರೆಸ್ಸಿನ ವಾಗ್ದಾನ, ಆದರೆ ಕ್ರಿಯೆಯಲ್ಲಿ ಅದು ಶೂನ್ಯ. ಹೀಗಾಗಿ ಜನರೇ ಮುಂದಾಗಿ ಅಧಿಕಾರ ನಡೆಯಲು ಕ್ರಿಯಾತ್ಮಕವಾಗುವುದು. ಸ್ವರಕ್ಷಣೆಗಾಗಿ ಅಹಿಂಸಾತ್ಮಕ ನಿಲುವಿನ ಹೋರಾಟ ಹಿಂಸೆಗೆ ತಿರುಗುವುದು. ಸಮಾನತೆಗಾಗಿ

ಶಸ್ತ್ರ ಹಿಡಿಯುವುದು. ಇಲ್ಲೆಲ್ಲ ಗಾಂಧೀವಾದದ ಮಿತಿಗಳ ಮೀರುವಿಕೆಯನ್ನು ಕಾಣಬಹುದಾಗಿದೆ. ಗಾಂಧಿಯುಗದ ಆ ಸಂದರ್ಭದಲ್ಲೇ ಗಾಂಧೀಜಿ ಆದರ್ಶಗಳ ನೆಲಕಚ್ಚುವಿಕೆಯನ್ನು ಕಾಣುತ್ತೇವೆ.

ಹೇಮಾಳ ಆಕರ್ಷಣೆಯಿಂದ ಚಳುವಳಿ ಸೇರಿದ ವಿಶ್ವನಾಥ ಕೊನೆಯಲ್ಲಿ ಹುತಾತ್ಮ ಹೋರಾಟಗಾರನಾಗಿ ರೂಪುಗೊಳ್ಳುತ್ತಾನೆ. ಮಾರ್ಕ್ಸ್‌ವಾದಿ ತತ್ವಗಳ ಚೌಕಟ್ಟಿನಲ್ಲಿ ಲೈಂಗಿಕ ಸಂಯಮ ಮತ್ತು ಗುರಿ ಸಾಫಲ್ಯದ ಪ್ರಾಮುಖ್ಯತೆ ಇದಾಗಿದೆ. ಧ್ಯೇಯದ ಮುಂದೆ ಲೈಂಗಿಕ ತೆವಲುಗಳನ್ನು ಸಬ್ಲಿಮೇಟ್ ಮಾಡುವುದರ ಮೂಲಕ ಪಾತ್ರಗಳ ಜೀವನೋದ್ದೇಶದ ಘನತೆಯ ಅಂಗೀಕಾರವನ್ನು ಕಟ್ಟೀಮನಿಯವರ ಈ ರೀತಿಯ ದೃಷ್ಟಿಕೋನ ಮೂರ್ತಗೊಳಿಸುತ್ತದೆ. ಹೋರಾಟಕ್ಕಾಗಿ ಹೆಣ್ಣುಗಂಡೆಂಬ ಕಲ್ಪನೆಯೇ ಅತೀತವಾಗಿ ಕ್ರಿಯೆ ಪ್ರಧಾನವಾಗುವ ಔಚಿತ್ಯಗಳನ್ನು ಕಾಣಬಹುದು. ಇದು ಕಟ್ಟೀಮನಿಯವರ ಸಂಯಮ, ಸಮಯಪ್ರಜ್ಞೆಗೆ ಪ್ರತೀಕವಾಗಿದೆ.

'ಜ್ವಾಲಾಮುಖಿಯ ಮೇಲೆ' ಪ್ರಖರ ರಾಜಕೀಯ ಪ್ರಜ್ಞೆಯುಳ್ಳ ಕಾದಂಬರಿ ಮತ್ತು ರಾಷ್ಟ್ರೀಯ ಪ್ರಜ್ಞೆಯನ್ನು ಮೀರಿದ ರಾಜಕೀಯ ಕಾದಂಬರಿ' ಎಂದು ಅಶೋಕ ಶೆಟ್ಟರ ಹೇಳುತ್ತಾರೆ (೧೯೯೨:೯).

> "'ಜ್ವಾಲಾ' ಕಾದಂಬರಿ ವಿಷಯ ವಿಷವ್ಯೂಹಗಳ ಮಧ್ಯೆ ಅಶಾಂತಿಯ ಜ್ವಾಲಾಮುಖಿಯ ಮೇಲೆ ನಿಂತಿರುವ ಇಂದಿನ ಭಾರತದ ಚಿತ್ರ" - 'ತಾಯಿನಾಡು' ಪತ್ರಿಕೆ (ಉದ್ಧೃತ: ಕಾದಂಬರಿಕಾರನ ಕಥೆ ೧೯೮೧: ೩೪೪).
>
> "ಪ್ರಗತಿಶೀಲ ಸಾಹಿತ್ಯವೆಂದರೇನು ಎನ್ನುವುದಕ್ಕೆ 'ಜ್ವಾಲಾ' ಸಜೀವ ಉದಾಹರಣೆ. ಇದೊಂದು ಕ್ರಾಂತಿಕಾರಕ ಅದ್ಭುತ ರಮ್ಯ ಕಾದಂಬರಿ"- ಪ್ರಜಾಮತ (ಉದ್ಧೃತ ಕಾದಂಬರಿಕಾರನ ಕಥೆ. ೧೯೮೧: ೩೪೪).
>
> "ಜ್ವಾಲಾಮುಖಿಯ ಮೇಲೆ........ ವರ್ಗ ಸಂಘರ್ಷದ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಕಾದಂಬರಿಗೆ ಹೆಗಲೆಣೆಯಾಗುವ ಕೃತಿ ಪ್ರಗತಿಶೀಲರಲ್ಲಿ ವಿರಳವಾಗಿದೆ. ಕಾರ್ಮಿಕರ ಶೋಷಣೆ ಮತ್ತು ಪ್ರತಿಭಟನೆಯ ಹಿನ್ನೆಲೆ, ಹುಟ್ಟು, ಪರಿಣಾತ್ಮಕವಾದ ಬೆಳವಣಿಗೆಗೆ ಸಂಘರ್ಷದ ಕ್ರಿಯಾರೂಪವನ್ನು ವಿವಿಧ ವಿನ್ಯಾಸದಲ್ಲಿ ಸೆರೆ ಹಿಡಿದಿದ್ದಾರೆ. ಆದರೆ ಇವೆಲ್ಲ ಒಂದು ಸಂಕೀರ್ಣ ಸ್ವರೂಪದಲ್ಲಿ ಒಂದರೊಳಗೊಂದು ಅರಳುತ್ತಾ ಬೆಳೆಯುತ್ತಾ ಹೋಗುತ್ತವೆ. ಗಾಂಧೀವಾದಿಯಾಗಿದ್ದ ಕಾಂಗ್ರೆಸ್ಸಿಗ ಚಂದ್ರಣ್ಣ ಸೌಮ್ಯವಾದಿಯಾಗಿ ಪರಿವರ್ತನೆಯಾಗುವವರೆಗಿನ ಬೆಳವಣಿಗೆ ವರ್ಗಸಂಘರ್ಷ ಬೆಳವಣಿಗೆ ಸಹ ಆಗುತ್ತದೆ. ಹಾಗಂತ ನಾವು ಇಡೀ ಕಾದಂಬರಿಯನ್ನು ಚಂದ್ರಣ್ಣನ ಬೆಳವಣಿಗೆಯ

**ಹೆಜ್ಜೆ ಗುರುತಿಗಾಗೇ ಗಮನಿಸಬೇಕಾಗಿಲ್ಲ. ಯಾಕೆಂದರೆ ಇಲ್ಲಿ ನಮಗೆ ಕೃತಿಯ ಆಲೋಚನಾ ಸಂಗತಿ ಮುಖ್ಯ, ಆದ್ದರಿಂದ ಕಾದಂಬರಿಯ ಅಂತಃಸತ್ವವೆಂದರೆ ವರ್ಗ ಸಂಘರ್ಷದ ಚಾರಿತ್ರಿಕ ತಾತ್ವಿಕ ದರ್ಶನವೇನೆಂದರೆ ವರ್ಗ ಸಂಘರ್ಷದ ಚಾರಿತ್ರಿಕ ತಾತ್ವಿಕ ದರ್ಶನವೇ ಆಗಿದೆ."**

(೧೯೯೩-೨೫೭) ಎಂದು ಆರ್.ವಿ. ಭಂಡಾರಿ ಹೇಳುತ್ತಾರೆ.

ಮೇಲಿನ ವಿಮರ್ಶಕರ ಮಾತುಗಳು ಮೂಲಭೂತವಾಗಿ ಕೃತಿಯ ವರ್ಗ ಸಂಘರ್ಷಣೆ, ಮತ್ತು ಅದರ ರಾಜಕೀಯ ಭಿತ್ತಿಗೆ ಪ್ರಾಧಾನ್ಯತೆಯನ್ನು ಕೊಡುತ್ತವೆ. ಈ ಕಾರಣಕ್ಕೆ ಇದೊಂದು ಕನ್ನಡ ಸಾಹಿತ್ಯದಲ್ಲಿ ಬಂದ ಪ್ರಥಮ ವರ್ಗ ಹೋರಾಟದ ಕಾದಂಬರಿ ಎಂದು ಹೆಸರುಗಳಿಸಿದೆ.

ಸೋಷಯಲಿಸ್ಟ್ ಮತ್ತು ಕಮ್ಯುನಿಸ್ಟರ ನಡುವಿನ ನಾಯಕತ್ವದ ಪೈಪೋಟಿ ಕಾದಂಬರಿಯ ಇನ್ನೊಂದು ಆಯಾಮ ಕೂಡ ಆಗಿದೆ. ಗಿರಣಿ ಕೂಲಿಕಾರರ ಹಿತರಕ್ಷಣೆಯ ನೆಪದಲ್ಲಿ ಧುರೀಣತ್ವ ಗಳಿಸಲು ಪೈಪೋಟಿ ನಡೆಸುವ ಎರಡು ಪಕ್ಷಗಳ ಸಂಘರ್ಷಣೆ, ಯಾವ ಪುರುಷಾರ್ಥವನ್ನು ಸಾಧಿಸದೇ ಹೋಗುವುದು ವಿಪರ್ಯಾಸದ ಸಂಗತಿ. ಶ್ರಮಿಕರಿಗೆ ಯಾವ ಪಕ್ಷ ಬಂದರೇನು? ಅವರಿಗೆ ಬೇಕಾಗಿದ್ದು ತಮ್ಮ ಬೇಡಿಕೆಗಳ ಈಡೇರಿಕೆ, ಅದಕ್ಕೆ ಕಮ್ಯುನಿಸ್ಟರೇನು, ಸೋಷಲಿಷ್ಟರೇನು? ಆದರೂ ಕಾದಂಬರಿಯಲ್ಲಿ ಆದದ್ದೇನು? ಕಾರ್ಮಿಕರ ನಿರಂತರ ಗೋಳು ಇದೆ. ಮುಕ್ತ ಸ್ವಾತಂತ್ರ್ಯಕ್ಕಾಗಿ ಶೋಷಣೆ ರಹಿತ ಬದುಕಿಗಾಗಿ ನಡೆವ ಹೋರಾಟವಿದೆ. ಇಂಥ ಕಟು ವಾಸ್ತವಗಳ ಗಣಿ ಕಾದಂಬರಿಯಾಗಿದೆ. ಶೋಷಣೆಯ ನಿರಂತರತೆಯನ್ನು ಸೂಚಿಸುವ ಹತಾಶತೆಯೊಂದಿಗೆ ಶ್ರಮಿಕ ವರ್ಗದ ಗೆಲವು ಸಾಧ್ಯವೆನ್ನುವ ಸಾಂಕೇತಿಕ ಕೊನೆ ಕಾದಂಬರಿಯದಾಗಿದೆ. ಕೊನೆಯಲ್ಲಿ ಕಾಣುವ ಜ್ವಾಲೆ ಬಂಡವಾಳ ಶಾಹಿತ್ವದ ಹುಟ್ಟಡಗಿಸುವ ಸಂಕೇತವಾಗಿದೆ.

ಮುಖ್ಯವಾಗಿ ವರ್ಗ ಪ್ರಜ್ಞೆಯ ಹಿನ್ನೆಲೆಯಲ್ಲಿ ಕ್ರಿಯಾತ್ಮಕಗೊಳ್ಳುವ ಈ ಕಾದಂಬರಿ ಸ್ವಾತಂತ್ರ್ಯಾ ನಂತರದ ಮೊದಲ ದಶಕದ ಚಾರಿತ್ರಿಕ ಹೋರಾಟದ ಸಂದರ್ಭಗಳನ್ನು ಕಟ್ಟಿಕೊಡುತ್ತದೆ.

ಸಮಾಜದಲ್ಲಿನ ಆರ್ಥಿಕ ವಿಷಮತೆ ಮತ್ತು ಜಾತಿ ಸ್ತರಗಳ ಕುರಿತು ಆಕ್ರೋಶ ವ್ಯಕ್ತ ಪಡಿಸುವ ಕಟ್ಟೀಮನಿಯವರು ಸಮಕಾಲೀನ ಸಂದರ್ಭದ ಸಾಮಾಜಿಕ ಬದುಕಿನ ಗಾಢ ಚಿತ್ರಣವನ್ನು ಇದರಲ್ಲಿ ಚಿತ್ರಿಸುತ್ತಾರೆ. ಪೂರ್ಣ ಬದುಕಿಗಾಗಿ ತಹತಹಿಸುವ ಇಲ್ಲಿನ ಪಾತ್ರಗಳು ಶೋಷಕ- ಶೋಷಿತರ ನಡುವಿನ ಕಂದರಗಳಾಗಿವೆ. ನೋವು ನಲಿವುಗಳ ಸೈದ್ಧಾಂತಿಕ ಬದ್ಧತೆಯನ್ನು ವೈಜ್ಞಾನಿಕವಾಗಿ ಒಪ್ಪಿಕೊಳ್ಳುವಲ್ಲಿ ಸೋಲುತ್ತವೆ. ಇಂತಹ ನೋವಿನ ಕಾರಣಗಳನ್ನು ವೈಜ್ಞಾನಿಕ ಅರಿವಿನ ಮೂಲಕ ಪಡೆದುಕೊಂಡು ಸಾರ್ಥಕವಾಗುವ ಪಾತ್ರಗಳನ್ನು ನಿರಂಜನರ 'ಚಿರಸ್ಮರಣೆ'ಯಲ್ಲಿ ಕಾಣುತ್ತೇವೆ ಕಟ್ಟೀಮನಿ ಕ್ರಾಂತಿಕಾರಿ

ಹೋರಾಟಗಳ ಸಂಪರ್ಕ ಹೊಂದಿದ್ದರೂ ನಿರಂಜನರಷ್ಟು ತಾತ್ವಿಕ ಬದ್ಧತೆ, ಸೈದ್ಧಾಂತಿಕ ಚೌಕಟ್ಟನ್ನು ಪಡೆಮುಕೊಳ್ಳುವಲ್ಲಿ ಎಲ್ಲೋ ಒಂದು ಕಡೆ ಅವರ ಪಾತ್ರಗಳಲ್ಲಿ ಕೊರತೆ ಕಾಣುತ್ತದೆ.

'ಮೋಹದ ಬಲೆಯಲ್ಲಿ' 'ಜರತಾರಿ ಜಗದ್ಗುರು' 'ಆಶ್ರಮವಾಸಿ' ಮನುಷ್ಯನ ತೀವ್ರ ಚಪಲದ ಹಿನ್ನಲೆಯಲ್ಲಿ ಮೂಡಿಬಂದ ಕೃತಿಗಳಾಗಿವೆ.

ಕಟ್ಟೀಮನಿ 'ಕಪನಿ ಮತ್ತು ಸೀರೆ' ಬರೆಯಬೇಕೆಂದು ೧೯೫೦ರ ಫೆಬ್ರವರಿ ಎರಡರಂದು ಆರಂಭಿಸಿ ಹತ್ತುತಿಂಗಳ ನಂತರ ಬರೆದರು. ಬರೆದ ನಂತರವೇ ಅದು 'ಮೋಹದ ಬಲೆಯಲ್ಲಿ' ಎಂದಾಗಿದ್ದು. ಕ್ರಿಯಾ ಪ್ರಧಾನವಾದ ಈ ಕಾದಂಬರಿ ವೀರಶೈವ ಗುರುವೊಬ್ಬನ ನೈತಿಕ ಅಧಃಪತನದ ಸುತ್ತ ಹೆಣೆದ ಕೃತಿಯಾಗಿದೆ. ವ್ಯಕ್ತಿಯ ಇಂಥ ಸ್ಥಿತಿಗೆ ಸರಿಯಾದ ಕಾರಣ ಗುರುತಿಸದೆ ಹೀಗೆ ಹೇಳಿಬಿಡುವುದು ಸರಿಯೆ? ಕೇವಲ ಒಂದು ನಿಟ್ಟಿನ (ಸಂಪ್ರದಾಯಬದ್ಧ) ಆಲೋಚನೆ ವಸ್ತು ಸತ್ಯದ ಮಗದೊಂದು ಮುಖವನ್ನು ಮರೆ ಮಾಡಿದಂತಾಗುವುದಿಲ್ಲವೆ?

ಸಿದ್ಧವೀರಸ್ವಾಮಿಯ ಒಂದು ಮಾತನ್ನು ಇಲ್ಲಿ ಗಮನಿಸಬಹುದು "ನನ್ನ ಅಭಿಪ್ರಾಯ ಕೇಳುವ ಗೊಡವೆಗೆ ಹೋಗದೆ ನನ್ನ ಇಚ್ಛೆಗೆ ವಿರುದ್ಧವಾಗಿ ವಿರಕ್ತಿಯನ್ನು ತೊಡಿಸಲಾಗಿದ್ದಿತು. ಸ್ವಾಮಿಯಾದುದರಿಂದ ಸಂಸಾರಿಯಾಗುವಂತಿರಲಿಲ್ಲ. ಇನ್ನೇನು ಮಾಡುವುದು?" ಕೊನೆಯ ಮಾತು ತುಂಬ ಅರ್ಥಪೂರ್ಣವಾಗಿದೆ. ಇನ್ನೇನು ಮಾಡುವುದು? ಎನ್ನುವಲ್ಲಿ ಅನಿವಾರ್ಯತೆ ಸ್ವಾಮಿಯನ್ನು ರಾಗಾನುಭವಗಳ ದಾಸನನ್ನಾಗಿ ಮಾಡಿತು ಎಂಬ ಧ್ವನಿ ಇದೆ.

ಸತ್ಪ್ರೇರಣೆಯಿಂದ ಬಂದ ವಿರಕ್ತತನ ಇದಾಗಿರದೆ ಒತ್ತಾಯದಿಂದ ಹೇರಲ್ಪಟ್ಟದ್ದಾಗಿದೆ. ಮಾನವನ ಸಹಜ ತೆವಲುಗಳು ಪರಾಕಾಷ್ಟತೆಗೇರಿದಾಗ ತೀರಿಸಿಕೊಳ್ಳುವ ಚಪಲ ಒಂದೆಡೆ, ಸ್ಥಾನ ಗೌರವ ಇನ್ನೊಂದೆಡೆ, ಆಗ ತನ್ನ ನಂಬದ, ತಾನು ಪ್ರತಿನಿಧಿಸುವ ಬದ್ಧ ವ್ಯವಸ್ಥೆಯ, ಚಕ್ರವ್ಯೂಹವನ್ನು ಬೇಧಿಸಲಾರದೆ ಮುಚ್ಚುಮರೆಯಲ್ಲಿ ರಾಸಕ್ರೀಡೆಗಿಳಿಯುತ್ತಾನೆ. ನೋಡುವವರಿಗಿದು ವ್ಯಭಿಚಾರ, ಮಾಡುವವರಿಗೆ ಸದಾಚಾರ.

ಇಲ್ಲಿ ಆಯ್ಕೆ ಮತ್ತು ಅಪೇಕ್ಷೆ ಪ್ರಶ್ನೆ ಹುಟ್ಟುತ್ತದೆ. ಗುರುವೆಂಬ ಕಾರಣಕ್ಕಾಗಿ ಜೈವಿಕ ಸಹಜವಾದ ಉತ್ಕಟತೆಗಳನ್ನು ಹತ್ತಿಕ್ಕುವುದು ಎಷ್ಟು ಸರಿ? ತನ್ನ ವೈಯಕ್ತಿಕ ಜೀವನವನ್ನು ಕಡೆಗಣಿಸಿ ಮತ್ತೊಬ್ಬರಿಗೆ ಮಾರ್ಗದರ್ಶಿಯಾಗುವುದು ಯಾವ ಪುರುಷಾರ್ಥ? ವ್ಯಕ್ತಿಯೊಬ್ಬ ವೈಯಕ್ತಿಕ ಬೇಕು ಬೇಡಿಕೆಗಳ ಮೂಲಕ ತಾನು ಬದುಕುವ ಸಮುದಾಯದ ಸಾಂಸ್ಕೃತಿಕ ವ್ಯಕ್ತಿಯಾಗಿ ಉಳಿಯಲು ಸಾಧ್ಯವಿಲ್ಲವೆ?

ಸಿದ್ಧವೀರಸ್ವಾಮಿಯಂತಹ ಮಠಾಧೀಶರನ್ನು ಮಾತ್ರ ಬಯಲಿಗೆಳೆಯುವ ಲೇಖಕರ ರೋಷ ಅವರೊಂದಿಗೆ ರಮಿಸುವ ಹೆಂಗಸರನ್ನು ಅನುಕಂಪಯುತವಾಗಿ ನೋಡುತ್ತದೆ. ಒಂದೇ ಕೈಯಿಂದ ಚಪ್ಪಾಳೆಯಾಗದು. ಸಿದ್ಧವೀರಸ್ವಾಮಿ ಭೋಗಿಸಿದ ಹೆಣ್ಣುಗಳೆಲ್ಲ ಅವರ ಬಲತ್ಕಾರಕ್ಕೆ ಬಲಿಯಾದವರಲ್ಲ. ಯಾವುದೋ ಒಂದು ಆಸೆ ಅತೃಪ್ತಿ ಪೂರ್ಣತೆಗಾಗಿ ಭೋಗವಸ್ತುವಾದಂಥದು. ಈ ಹೆಣ್ಣುಗಳು ಮೇಲ್ನೋಟಕ್ಕೆ ಹಿಂದೇಟು ಹಾಕಿದರೂ ಅನೇಕ ಕಾರಣಗಳಿಂದ ಅವರ ಸುಪ್ತ ಮನಸ್ಸುಗಳು ಇದನ್ನು ಅಪೇಕ್ಷಿಪಡುತ್ತದೆ. ಸಂಭೋಗ ಕ್ರಿಯೆಯ ಸಂದರ್ಭದ ಅವರ ಮನೋಭಿತ್ತಿಗಳು ಸಂಪೂರ್ಣವಾಗಿ ಆ ಚಟುವಟಿಕೆಯಲ್ಲಿ ಅಳುಕಿಲ್ಲದೆ ರಮಿಸುತ್ತವೆ. ಅಂದಾಗ ತಪ್ಪೇನು, ಇದಕ್ಕೆ 'ಜರತಾರಿ ಜಗದ್ಗುರು'ವಿನ ಮಹಾದೇವಿ ಒಳ್ಳೆ ನಿದರ್ಶನ.

ತಾರುಣ್ಯದಲ್ಲಿಯೇ ವಿಧವೆಯಾಗಿ ನಾಲ್ಕು ಗೋಡೆಗಳ ಸಂಧಿಯಲ್ಲಿ ಬಂಧಿತಳಾದ ಸರಸ್ವತಿ ಹೊರ ಜಗತ್ತಿನ ಸಂಬಂಧವನ್ನೇ ಕಡಿದುಕೊಂಡವಳು. ಮಠದಲ್ಲಿ ನಡೆಯುವ ಪುರಾಣ ಪುಣ್ಯ ಕಥೆಗಳೇ ಅವಳ ಪ್ರಪಂಚ. ಸಿದ್ಧವೀರಸ್ವಾಮಿಯ ತೇಜಸ್ಸು ಅವಳನ್ನು ಕಾಡಿದರೆ, ಎದುರು ಮನೆಯ ಉತ್ಸಾಹರಹಿತ ಶಿವಮೂರ್ತಿಯೊಂದಿಗೆ ಓಡಿಹೋಗುತ್ತಾಳೆ. ಶಿವಮೂರ್ತಿಯ ನಿರ್ಲಿಪ್ತತನ ಅವಳು ಬಯಸಿದ ಸುಖ ನೀಡದೇ ಹೋಗುತ್ತದೆ. ತಾನು ಬದುಕುವ ವ್ಯವಸ್ಥೆಯಲ್ಲಿ ಯಾವುದು ನಿಷಿದ್ಧವೋ ಅದನ್ನೇ ಅವಳು ಮಾಡುತ್ತಾಳೆ.

ತನ್ನ ಅತೃಪ್ತ ಬಯಕೆಗಳನ್ನು, ಶಿವಮೂರ್ತಿಯಿಂದ ಪೂರ್ಣಗೊಳ್ಳದ ಹಸಿವುಗಳನ್ನು ಸಿದ್ಧವೀರಸ್ವಾಮಿಯಿಂದ ಪಡೆಯುತ್ತಾಳೆ. ಕೊನೆಗೆ ಸ್ವಾಮಿಯಿಂದಲೂ ವಿಮುಖಳಾಗುತ್ತಾಳೆ. ತೃಪ್ತ ಬದುಕಿನ ಅರ್ಥ ಅರಿಯಲಾಗದೆ ಅತೃಪ್ತ ಬದುಕಿನ ಅರ್ಥಹೀನತೆಗೆ ಹೇಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಸರಸು ಮನುಷ್ಯ ಸ್ವಭಾವದ ಚಂಚಲತೆಯ ಪ್ರತೀಕ. ಒಬ್ಬರಿಂದ ಈಡೇರದ್ದು ಇನ್ನೊಬ್ಬನಿಂದ ಈಡೇರುತ್ತದೆ. ಹಾಗೇ ಒಬ್ಬಳಿಂದ ಸಿಗಲಾರದ್ದನ್ನು ಇನ್ನೊಬ್ಬಳಿಂದ ಪಡೆಯುವ ಪುರುಷ ಪಾತ್ರಗಳ ಸಂದರ್ಭ ತುಂಬ ಕುತೂಹಲವೆನಿಸುತ್ತದೆ. ಸ್ವಚ್ಛವಾದ ಲೈಂಗಿಕ ಪ್ರವೃತ್ತಿ ಬಯಸುವ ಇವು ಸಮಾಜದ ಷಂಡತನವನ್ನು ಪ್ರಶ್ನೆಮಾಡುತ್ತದೆ.

ಕೃತಿಯ ಬಗ್ಗೆ ಹೇಳುವ ಆರ್.ವಿ. ಭಂಡಾರಿಯವರು "ಮೋಹದ ಬಲೆಯಲ್ಲಿ ಮತ್ತು ಜರತಾರಿ ಜಗದ್ಗುರು ಎರಡೂ ಕಾದಂಬರಿಗಳು ಅವಳಿ-ಜವಳಿ ಕಾದಂಬರಿಗಳು. ಆದರೂ ಎರಡೂ ಪ್ರತ್ಯೇಕ ಕೃತಿಗಳೇ. ಈ ಎರಡು ಕಾದಂಬರಿಗಳು ವೀರಶೈವ ಸಮಾಜದ ಮಠ ಮತ್ತು ಜಗದ್ಗುರುಗಳ ಸುತ್ತಲೇ ಹೆಣೆಯಲ್ಪಟ್ಟಿವೆ. ಜಗದ್ಗುರುಗಳ ಕಾಮಪಿಪಾಸೆ, ಅದಕ್ಕೆ ಬಲಿಯಾಗುವ ಹೆಣ್ಣುಗಳು, ಜಗದ್ಗುರುಗಳನ್ನೇ ಮುಂದಿಟ್ಟುಕೊಂಡು ಮುಖಂಡರು ನಡೆಸುವ ಭ್ರಷ್ಟ ರಾಜಕೀಯ, ಸ್ವಾರ್ಥ ಇವುಗಳ ಜ್ವಲಂತ ಚಿತ್ರವನ್ನು ಇವು ಕೊಡುತ್ತವೆ.

ವರ್ಗ ಮತ್ತು ವರ್ಣ ಸಂಘರ್ಷದ ದೃಷ್ಟಿಯಿಂದ ಇವು ಗಮನಾರ್ಹವಲ್ಲದಿದ್ದರೂ, ಲೇಖಕರ ಸಮಾಜವಾದಿ ಸಾಮಾಜಿಕ ಪ್ರಜ್ಞೆಯ ಹಿನ್ನೆಲೆ ಇಲ್ಲಿಯ ಚಿಂತನ ದ್ರವ್ಯವಾಗಿರುವುದು ಕೃತಿಯ ಹೆಚ್ಚಳ.

ಮೇಲಿನ ಹೇಳಿಕೆ ಕೃತಿಗೆ ತುಂಬ ಉಪಯುಕ್ತ ಎನಿಸಿದರೂ ಕೆಲವು ಮಿತಿಗಳನ್ನು ಹೊಂದಿದೆ. ನೇರವಾಗಿ ಜಗದ್ಗುರುಗಳನ್ನು ಕಟಕಟೆಯಲ್ಲಿ ನಿಲ್ಲಿಸುವ ಚಿತ್ರಣ ಸೂಕ್ತವೆನಿಸದು. ಕೆಳಗಿನ ಮಾತಿನಿಂದ ಇದನ್ನು ಸ್ಪಷ್ಟವಾಗಿ ಕಟ್ಟಿಕೊಳ್ಳಬಹುದೆನಿಸುತ್ತದೆ.

> "ಸರಿಯಾಗಿಯೇ ಹೇಳಿದೆ ಸರಸು. ನಾವು ಸ್ವಾಮಿಗಳಲ್ಲ ಗೂಳಿಗಳೆಂಬುದೇ ನಿಜ. ದೇವರ ಹೆಸರಿನಲ್ಲಿ ಸಮಾಜ ಬಿಟ್ಟ ಹೋರಿಗಳು. ಮನಸ್ಸು ಬಂದಲ್ಲಿ ಮೇಯುವೆವು. ದೇವ ಗೂಳಿಗಳಾದ್ದರಿಂದ ಯಾವ ನಿರ್ಬಂಧವೂ ನಮಗಿಲ್ಲ."
> (ಪು ೩೫೩)

ಈ ಒಂದು ಮಾತು ಕಾದಂಬರಿಯನ್ನು ಬೇರೆ ರೀತಿಯಲ್ಲಿ ಆಲೋಚನೆ ಮಾಡಲು ಸಹಾಯಕವಾಗುತ್ತದೆ. 'ಗೂಳಿ' ಅಂದರೆ ಹೋರಿ. ಚಿಕ್ಕದಿರುವಾಗ ಯಾವ ಥರದ ಪ್ರಬುದ್ಧಭಾವನೆಗಳು ಅದಕ್ಕಿರುವುದಿಲ್ಲ. ಅದನ್ನು ಸಮಯಕ್ಕೆ ತಕ್ಕಂತೆ ಸರಿಯಾಗಿ ಬಳಸಿಕೊಂಡರೆ ಒಳ್ಳೆ ಎತ್ತಾಗಿ ರೈತನಿಗೆ ಜೀವನಾಧಾರವಾಗಿ ನಿಲ್ಲುತ್ತದೆ. ಅದೇ ಅದನ್ನು 'ತಡ್ಲಿ' ಬಿಟ್ಟರೆ ವಿರುದ್ಧ ದಿಕ್ಕಿನಲ್ಲಿ ಕೆಲಸ ಮಾಡುತ್ತದೆ. ಬಾಯಿಗೆ ಬಂದ ಬೆಳೆಗಳನ್ನು ತಿಂದು ಎದುರಿಗೆ ಬಂದ ಎತ್ತುಗಳನ್ನು ಹಾಯ್ದು ಹಾಳು ಮಾಡುತ್ತದೆ. ಇಲ್ಲಿ (ಎರಡೂ ಕಾದಂಬರಿಯಲ್ಲಿ) ಸಿದ್ಧವೀರಸ್ವಾಮಿಯ ಸ್ಥಿತಿಯೂ ಹಾಗೇ. ಹಿಂದೆ ಹೇಳಿದಂತೆ ಜಗದ್ಗುರು ಪಟ್ಟ ಅವರ ಪ್ರಜ್ಞೆಗೆ ವಿರುದ್ಧವಾಗಿ ಲಭ್ಯವಾದದ್ದು. ಸಮಾಜ ವ್ಯವಸ್ಥೆ ಆತನನ್ನು ಎಳೆತಂದು ಆತನ ಹಿನ್ನೆಲೆಯಲ್ಲಿ ತನ್ನ ಶುಚಿತ್ವಗಳನ್ನು ತೀರಿಸಿಕೊಳ್ಳಲು ಹವಣಿಸುತ್ತದೆ ಈ ಎಲ್ಲ ಸಂಗತಿಗಳಿಂದ ಮದವೇರಿದ ವ್ಯಕ್ತಿ. ಬಾಯಿಗೆ ಬಂದ (ಬೆಳೆ) ಹೆಣ್ಣುಗಳನ್ನು ಅನುಭೋಗಿಸುತ್ತದೆ. ಇದು ಹತ್ತಿಕ್ಕಿದ ಕಾಮನೆಗೆ ವ್ಯವಸ್ಥೆಯು ರೂಪಿಸಿದ ಸತ್ಪ್ರೇರಣೆ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

ಗಂಡು-ಹೆಣ್ಣಿನ ನಿಸರ್ಗ ಸಹಜ ನಿಯಮವನ್ನು ಪ್ರತಿರೋಧಿಸಿ ತರುಣ ಜಂಗಮಗೆ ಸನ್ಯಾಸ ದೀಕ್ಷೆಕೊಡುವುದು ತಪ್ಪು ಎಂಬುದು ಒಟ್ಟು ಚರ್ಚೆಯ ತಿರುಳು.

ತರುಣ ವಿಧವೆಯಾದ ಸರಸು ಒತ್ತಾಯಪೂರ್ವಕವಾಗಿ ಸಹಜ ಬಯಕೆಗಳಿಂದ ವಂಚಿತಳಾಗುವ ಸ್ಥಿತಿ ಕೊನೆಗೆ ಅವಳು ಅಧೋಗತಿಗಿಳಿಯುವ ಸಂದರ್ಭವನ್ನು ರೂಪಿಸುತ್ತದೆ. ಸಾತ್ವಿಕರೂ, ಸಂಪ್ರದಾಯವಂತರೂ ಆದ ತಂದೆಯ ಅಂತಸ್ತಿನ ಹುಚ್ಚು, ಪ್ರಕೃತಿ ವಿರುದ್ಧವಾದ ಸಾಮಾಜಿಕ ಬಂಧನಗಳು ಈ ದುರಂತಕ್ಕೆ ಭಾಜನವಾಗುತ್ತದೆ.

'ಜರತಾರಿ ಜಗದ್ಗುರು' ಕೂಡ ಇದೇ ಮಾದರಿಯದೆ; ಹಾಗಂತ ಕೆಲ ವಿಮರ್ಶಕರು 'ಮೋಹದ ಬಲೆಯಲ್ಲಿ'ಯ ಉತ್ತರಾರ್ಧ ಎಂದು ಹೇಳುತ್ತಾರೆ (ಸುಧಾಕರ

೧೯೬೯:೧೭೪). ಹಿಂದೆ ಭಂಡಾರಿಯವರ ನಿರ್ವಚನೆಯಲ್ಲಿ ಇದನ್ನು ಸ್ಪಷ್ಟವಾಗಿಸಲಾಗಿದೆ. ಇವೆರಡೂ ಬೇರೆ ಬೇರೆ ಕೃತಿಗಳು ಎಂಬುದು ಖಚಿತ.

ಈ ಕಾದಂಬರಿಯಲ್ಲಿನ ಮಹಾದೇವಿ, ಆ ಮೂಲಕ ಮಠಾಧಿಪತಿಯಾಗುವ ಸಿದ್ಧವೀರಸ್ವಾಮಿ, ಮಕ್ಕಳಿಲ್ಲದ ಕಾರಣಕ್ಕೆ ತುಂಬಾ ಸಾತ್ವಿಕಳೂ ಗೌರವಪೂರ್ಣಳೂ ಅಚಲ ನೈತಿಕ ಚಾರಿತ್ರ್ಯವುಳ್ಳವಳೂ ಆದ ಅವಳು ಜಗದ್ಗುರುವಿಗೆ ಸೆರಗು ಹಾಸುತ್ತಾಳೆ. ಇದಕ್ಕೆ ಕಾರಣ ಹೆಂಡತಿಯ ಕಾಮವನ್ನು ಹಿಂಗಿಸದ ಗಂಡ ತನ್ನರ್ಧ ವಯಸ್ಸಿನ ಈ ಹುಡುಗಿಯನ್ನು ಮದುವೆಯಾಗುತ್ತಾನೆ. ಇಲ್ಲಿ ಸೇರಿಗೆ ಸವ್ವಾಸೇರು ವರಸೆ. ಆದರೆ ಇದೆಲ್ಲವೂ ಪ್ರಜ್ಞೆಯ ನೆಲೆಯಲ್ಲೇ ನಡೆಯುವಂಥದ್ದು. ಒತ್ತಾಯ ಇದರ ಹಿಂದೆ ಇಲ್ಲ.

ಸಿದ್ಧವೀರಸ್ವಾಮಿಯ ವೈಯಕ್ತಿಕ ಜೀವನವನ್ನು ನೋಡಿದಾಗ ಕಾದಂಬರಿಯಲ್ಲಿ

> "ಬಾಲ್ಯದಿಂದಲೂ ಹೆಣ್ಣೆಂದರೆ ವಿಪರೀತ ಹುಚ್ಚು, ಹೆಣ್ಣಿನ ಹುಚ್ಚು ನಮ್ಮ ಮನೆತನದ ರಕ್ತದಲ್ಲೇ ಬಂದುಬಿಟ್ಟಿದೆ. ನಮ್ಮಪ್ಪ ಹಾಗಿದ್ದ, ಅವರಪ್ಪ ಹಾಗಿದ್ದ, ಅವರಜ್ಜ ಹಾಗಿದ್ದ; ನಾವೂ ಅವರ ಹಾಗೇ ಆದೆವು"

ಈ ಮಾತು ತುಂಬ ಗಮನಾರ್ಹ. ಸ್ವಭಾವಕ್ಕೆ ವಿಸಂಗತವಾದ ವಿರಕ್ತಿ ಇದು. ಸಿದ್ಧವೀರಸ್ವಾಮಿಯ ಚಾರಿತ್ರಿಕ ಅಧಃಪತನ ವೈಯಕ್ತಿಕವಾದದ್ದು, ವಾಂಶಿಕವಾದದ್ದು, ಒತ್ತಾಯವುಳ್ಳದ್ದು. ಕಾರಣ ತಪ್ಪು ಅವನದಲ್ಲ ಎಂಬುದು ಸ್ಪಷ್ಟ.

ಮಹದೇವಿ ಪಾತ್ರವನ್ನು ತುಂಬ ಅನುಕಂಪದಿಂದ ನೋಡುವ ಬಹಳ ಜನ ವಿಮರ್ಶಕರು ಸಿದ್ಧವೀರಸ್ವಾಮಿಯನ್ನೇ ತಪ್ಪುಗಾರನನ್ನಾಗಿಸುತ್ತಾರೆ. ಮಕ್ಕಳಿರದ್ದಕ್ಕಾಗಿ ಛೇಡಿಸುವ ಸಮಾಜ, ಮಕ್ಕಳಿಗೆಂದು ಆಸೆ ಪಟ್ಟರೆ ಅದನ್ನು ಸಹಿಸಲಾರದು ಒಟ್ಟು ವ್ಯವಸ್ಥೆಯ ಅಸಂಗತತೆ ಇದಕ್ಕೆ ಮೂಲಭೂತ ಕಾರಣ. ಸಮಾಜವಾದಿ ಪ್ರಜ್ಞೆಯಿಂದ ಪ್ರೇರಣೆ ಪಡೆದ ಎರಡೂ ಕಾದಂಬರಿ ಮನುಷ್ಯ ಬದುಕಿನ ಮೂಲಭೂತ ಆವಶ್ಯಕತೆಗಳ ಈಡೇರಿಕೆಯ ಪ್ರಯತ್ನವನ್ನು ಬಿಚ್ಚಿಡುತ್ತವೆ.

ಮುಖ್ಯವಾಗಿ ವ್ಯಕ್ತಿ ಚಾರಿತ್ರ್ಯದ ಪರಿಶುದ್ಧತೆಯನ್ನು ಎರಡೂ ಕೃತಿಗಳು ಎತ್ತಿಹೇಳುತ್ತವೆ. ಇದಕ್ಕೆ ಕಾರಣ ಇಲ್ಲದಿಲ್ಲ. ವ್ಯಕ್ತಿಯ ನೈತಿಕ ಶುದ್ಧತೆ ಗಾಂಧಿ ಯುಗದ ಮಹತ್ವದ ಮೌಲ್ಯಗಳಲ್ಲೊಂದು. ಈ ನೈತಿಗೆ ಮೌಲ್ಯಗಳು ಆ ಕಾಲದ ಅನೇಕ ಕಾರ್ಯ ಕರ್ತರನ್ನು ಪ್ರೇರೇಪಿಸಿದಂತೆ ಲೇಖಕರ ಮೇಲೂ ಪ್ರಭಾವ ಬೀರಿವೆ. ಅಂಥವರಲ್ಲಿ ಗಾಢ ಪ್ರಭವಕ್ಕೊಳಗಾದವರು ಕಟ್ಟೀಮನಿಯೊಬ್ಬರು. ಇದಕ್ಕಿಂತಲೂ ಹೆಚ್ಚು ಪರಿಣಾಮ ಬೀರಿದ್ದು ಬಸವಣ್ಣನವರ ಕಾಯಕ ತತ್ವ ಜಾತಿ ಸಮಾನತೆ ಸರಳತೆಗಳು. ಇದರಿಂದಾಗಿ ಕಟ್ಟೀಮನಿಯವರ ವೈಚಾರಿಕತೆಯ ಮೂಲಪ್ರೇರಣೆಗಳು ಇಲ್ಲಿಂದಲೇ ಮೈ ಪಡೆದುಕೊಳ್ಳುತ್ತವೆ ಎಂದು ಹೇಳಬಹುದು.

ಇದೇ ಮಾದರಿಯಲ್ಲಿ ಬರುವ ಇನ್ನೊಂದು ಕಾದಂಬರಿ 'ಆಶ್ರಮವಾಸಿ'. ಸನ್ಯಾಸಿಯೊಬ್ಬನ ಆಧ್ಯಾತ್ಮಿಕ ಪತನದ ಕೃತಿ. ಆಶ್ರಮವಾಸಿಯಾಗಿದ್ದರೂ ಸಿದ್ಧನಾಥನು ವಾಸನಾವಾಸಿಯಾಗಿ ಬದುಕಿನ ಪ್ರಲೋಭನೆಗೊಳಗಾಗಿ ಲೌಕಿಕ ಸ್ಥಿತಿಗೆ ಬರುವುದು ಕಾದಂಬರಿಯ ವಸ್ತು.

ಮೂರು ಕಾದಂಬರಿಗಿಂತ ಭಿನ್ನ ನೆಲೆಯ ವಸ್ತುವನ್ನೊಳಗೊಂಡ ಕಾದಂಬರಿ 'ಗಿರಿಯ ನವಿಲು'.

ಹೆಣ್ಣಿಗಿದ್ದ ಶಾಸ್ತ್ರದ ಕಟ್ಟಳೆಯನ್ನು ಕಳಚಿ ಸ್ವತಂತ್ರಳಾಗ ಬಯಸಿದ ಅಕ್ಕ ಮಹಾದೇವಿಯ ತುಮುಲಗಳು ಈ ಕಾದಂಬರಿಯ ವಸ್ತು. ಹೆಣ್ಣು ಗಂಡಿನ ಸಮಾನತೆ ಬಯಸುವ, ಹೆಣ್ಣುಗಂಡಿನ ಗುಲಾಮಳಲ್ಲ ಎನ್ನುವ ವೈಚಾರಿಕತೆಯುಳ್ಳ ದಿಟ್ಟ ಹೆಣ್ಣು ಮಹಾದೇವಿ. ಗೆಳತಿ ಕಮಲಿ ಪ್ರಸಂಗದಲ್ಲಿ ಅವಳಾಡುವ ಮಾತು ಗಮನಿಸುವಂಥವು. "ನೀನೊಂದು ಕತ್ತೆ..... ಇಷ್ಟು ತಿಳಿಯುವುದಿಲ್ಲ ನಿನಗೆ. ನಿನ್ನ ಗಂಡನೆನಿಸಿಕೊಳ್ಳುವವ ತನ್ನೊಬ್ಬನ ಸುಖ ನೋಡುವನೇ ಹೊರತು ನಿನ್ನ ಸುಖವನ್ನು ನೋಡುವುದಿಲ್ಲ. ಹೆಂಗಸರೆಂದರೆ ಏನೆಂದು ತಿಳಿದಿದ್ದಾರೆ ಈ ಗಂಡಸರು? ಮಕ್ಕಳನ್ನು ಹೆರುವ ಯಂತ್ರಗಳೇನು ನಾವು? ಒಂದು ಸಲವೂ ಇಂಥ ವಿಚಾರ ಬರಲಿಲ್ಲವೆ ನಿನಗೆ" (ಪು. ೭೩)

ಗಂಡಸಿನ ಯಜಮಾನತೆಯನ್ನು ಪ್ರಶ್ನಿಸುವ ಮೂಲಕ ಅಕ್ಕಮಹಾದೇವಿ ತನ್ನ ಜೀವನದಲ್ಲೂ ಅದನ್ನು ಧಿಕ್ಕರಿಸುವ ದಿಟ್ಟತನ ತೋರಿಸುತ್ತಾಳೆ. "ನಿಮ್ಮ ಕೊಟ್ಟಿಗೆಯಲ್ಲಿ ದನಗಳಿರುವ ಹಾಗೆ ಕುದುರೆಗಳಿರುವ ಹಾಗೆ ಅಂತಃಪುರದಲ್ಲಿ ಸ್ತ್ರೀಯರಿದ್ದಾರೆ. (ಪು. ೧೦೮) ಎನ್ನುವ ಮೂಲಕ ರಾಜ ಕೌಶಿಕನ ಪ್ರಭುತ್ವದ ಅಪೇಕ್ಷೆಯನ್ನೇ ಪ್ರಶ್ನಿಸುತ್ತಾಳೆ, ಪ್ರತಿಭಟಿಸುತ್ತಾಳೆ. ಇಲ್ಲಿ ಹೆಣ್ಣಿಗಿರುವ ಸಾಂಪ್ರದಾಯಿಕ ಚೌಕಟ್ಟನ್ನು ಮೀರುವುದು ಹೆಣ್ಣಿನ ಒಂದು ಅಸ್ತಿತ್ವದ ಸ್ಥಾಪನೆ ಕ್ರಿಯೆಯಾದರೆ, ಮುರಾರಿಯ ಮತೀಯ ಪಿತೂರಿ ಕಾದಂಬರಿಯ ಇನ್ನೊಂದು ಕ್ರಿಯೆಯಾಗಿದೆ.

೨

'ನರಗುಂದ ಬಂಡಾಯ' 'ಪೌರುಷ ಪರೀಕ್ಷೆ' 'ಸಂಗೊಳ್ಳಿರಾಯ ನಾಯಕ' ಈ ಮೂರು ಕಾದಂಬರಿ ಕುರಿತು ಪ್ರೊ.ಎಂ.ಎಚ್. ಕೃಷ್ಣಯ್ಯನವರು ಹೀಗೆ ಹೇಳುತ್ತಾರೆ:

ಮೂರು ಕಾದಂಬರಿಗಳಲ್ಲಿ ವಸಾಹತುಶಾಹಿ ವಿರುದ್ಧದ ಪ್ರಭುತ್ವಶಾಹಿ ಮತ್ತು ವಸಾಹತುಶಾಹಿಯ ವಿರುದ್ಧದ ಪ್ರಜಾಸತ್ತೆ ನಡೆಸಿದ ಹೋರಾಟಗಳ ಚಿತ್ರಣ ಕಂಡು ಬರುತ್ತದೆ. "ಒಂದೆಡೆ ವಸಾಹತುಶಾಹಿಯನ್ನು ವಿರೋಧಿಸುವ ಚಿತ್ರಣವಿದ್ದರೆ ಟಿಪ್ಪುವಿಗೆ ವಿರುದ್ಧವಾಗಿ ಬ್ರಿಟಿಷರ ನೆರವನ್ನು ಸ್ವಾಗತಿಸುವುದನ್ನು ಇನ್ನೊಂದೆಡೆ ಕಾಣುತ್ತೇವೆ" ಎನ್ನುವಲ್ಲಿ ಕಾದಂಬರಿಯೊಳಗಿನ ದ್ವಂದ್ವಗಳನ್ನು ಪತ್ತೆಹಚ್ಚಲು ಪ್ರಯತ್ನಿಸುತ್ತಾರೆ.

ಇಲ್ಲಿ ಪ್ರಭುತ್ವಶಾಹಿ ಮತ್ತು ವಸಾಹತುಶಾಹಿ ಎರಡು ಪಟ್ಟಭದ್ರ ಹಿತಾಸಕ್ತಿಗಳೇ ಆಗಿವೆ. ಕಾದಂಬರಿಯಲ್ಲಿ ಈ ದ್ವಂದ್ವ ಬಗೆ ಹರಿಯುವುದಿಲ್ಲ. ಈ ರೀತಿಯ ಗೊಂದಲಕ್ಕೆ ಲೇಖಕರ ತುರ್ತು ಪರಿಸ್ಥಿತಿಯಲ್ಲಿನ ಹಿನ್ನೆಲೆಗಳು ಕಾರಣವಾಗಿರಬಹುದು.

ಪ್ರಜಾ ಕಾಳಜಿ ನೆಲೆಯಲ್ಲಿ ಬ್ರಿಟಿಷ್ ವಸಾಹತನ್ನು ವಿರೋಧಿಸಿದರೆ ಪ್ರಭುತ್ವದ ಪುನರ್ ಸ್ಥಾಪನೆಗಾಗಿ ಅದೇ ಬ್ರಿಟಿಷ್ ವಸಾಹತನ್ನು ದೇಶಿ ಚಳುವಳಿಯ ವಿರುದ್ಧ ಬಳಸಿಕೊಳ್ಳುವ ಪ್ರಯತ್ನಗಳು ಮೇಲ್ನೋಟಕ್ಕೆ ದೋಷಯುಕ್ತವೆನಿಸಬಹುದು. ಆದರೆ ದೇಶಾಭಿಮಾನ, ಸ್ವಾತಂತ್ರ್ಯ, ಪ್ರಜಾಕಳಕಳಿಯ ನೆಲೆಯಲ್ಲಿ ಮುಖ್ಯವೆನಿಸುತ್ತವೆ. ಬರಹಗಾರರ ಗುರಿ ಕೂಡ ಇದೇ ಆಗಿದೆ.

ಈ ಕಾರಣಕ್ಕಾಗಿಯೇ ಕಾದಂಬರಿಗಳಲ್ಲಿ ವರ್ಗ ಸಂಘರ್ಷಕ್ಕಿಂತ ಸಮೂಹ ಜಾಗ್ರತಿಗೆ, ಸಂಪೂರ್ಣ ಸ್ವಾತಂತ್ರ್ಯಕ್ಕೆ ಹೆಚ್ಚು ಒತ್ತು ಬಿದ್ದಿದೆ.

ವಾಸ್ತವದ ನೆಲೆಯಲ್ಲಿ ಆಕಾರ ಪಡೆದುಕೊಳ್ಳುವ ಕಟ್ಟೀಮನಿಯವರ ಹೆಚ್ಚು ಕಾದಂಬರಿಗಳು ಇದೇ ಮಾದರಿಯವೇ ಆಗಿವೆ. ಹೋರಾಟದ ಮುನ್ನೆಲೆಯಲ್ಲಿ ಮತ್ತು ಸಂಪೂರ್ಣ ಹೋರಾಟಗಾರರು ಸಾಮಾನ್ಯ ಜನತೆಯಾದರೂ ಹೋರಾಟದ ಫಲ ಪ್ರಭುತ್ವಕ್ಕೆ ಉಳಿಯುತ್ತದೆ. ಕಾರಣ ಹೋರಾಟದ ನಿಯಂತ್ರಣಕಾರರೆಲ್ಲ ಮೇಲು ವರ್ಗದ ಬಂಡವಾಳಶಾಹಿಗಳೇ ಆಗಿದ್ದು, ಪ್ರಸ್ತುತ ಕಾದಂಬರಿಗಳಲ್ಲಿ ಗೋಸುಂಬೆತನದಲ್ಲಿ ವೈಯಕ್ತಿಕ ಜೀವನವನ್ನೇ ಕಳೆದುಕೊಂಡ ನಿರ್ವಿಣ್ಣ ಸ್ಥಿತಿಯನ್ನು ಕಾಣುತ್ತೇವೆ. ಇದಕ್ಕೆ 'ರಾಮನಾಯಕ' ಒಳ್ಳೆ ಉದಾಹರಣೆ.

'ದತ್ತು ಪುತ್ರ' ಕಾರಣಕ್ಕಾಗಿ ಹೊತ್ತಿಕೊಳ್ಳುವ 'ಬಂಡಾಯ' ಪಿತೂರಿಗಾರರ ಪಿತೂರಿ, ಭಾಸ್ಕರರಾಯನ ಮುತ್ಸದ್ದಿತನದ ಕೊರತೆ, ಅವಿವೇಕಗಳಿಂದಾಗಿ ಕೇವಲ ಆಂತರಿಕ ಸಂಘರ್ಷಣೆಯಲ್ಲಿ ಉಳಿದುಬಿಡುತ್ತದೆ. ಅದು ಒಂದು ಸಮುದಾಯದ ಪ್ರತೀಕವಾಗಿ ಕಾಣುವುದಿಲ್ಲ. ಬದಲಾಗಿ ಮಿತಿಯಾದ ಅರ್ಥದಲ್ಲಿ ಕೆಲಸ ಮಾಡುತ್ತದೆ.

ಡಾ.ಆರ್.ವಿ. ಭಂಡಾರಿಯವರು ಕಾದಂಬರಿಯನ್ನು ವರ್ಣ ಸಂಘರ್ಷದ ಹಿನ್ನೆಲೆಯಲ್ಲಿ ನಿರ್ವಚಿಸಲು ಪ್ರಯತ್ನಿಸುತ್ತಾರೆ.

... ಮೇಲು ಜಾತಿ- ಕೆಳ ಜಾತಿಯಲ್ಲಿಯ ಪೈಪೋಟಿ ಅಧಿಕಾರ ಗಳಿಸುವಲ್ಲಿ, ಲಾಭ ಗಳಿಸುವಲ್ಲಿ ತಲೆ ಹಾಕುತ್ತಲೇ ಇರುತ್ತದೆ. ಇದು ಸಂಘರ್ಷ ರೂಪದಲ್ಲಿ ಪೂರ್ತಿಗೊಂಡಿರುತ್ತದೆಂದೇನೂ ಅಲ್ಲದಿದ್ದರೂ ಅಲ್ಲಲ್ಲಿಯ ಸಂದರ್ಭ ಸಾಧ್ಯತೆಗೆ ಅನುಸರಿಸಿ ಕಿಡಿಕಾರುತ್ತಲೇ ಇರುತ್ತದೆ. ವರ್ಣಶಾಲೆಯ ಪ್ರಕ್ರಿಯೆಯ ಕುರಿತು ವಿಶ್ಲೇಷಿಸುವಾಗ ಈ ಒಳನೋಟಗಳನ್ನು ಆತಂಕಗಳನ್ನು ಗಮನಿಸಬೇಕಾಗುತ್ತದೆ (೧೯೯೩:೩೩೭).

ಈ ಮಾತಿನಲ್ಲಿ ಮುಖ್ಯವಾಗುವುದು ವರ್ಣದ ಬಾಹುಳ್ಯತೆ ಕಾದಂಬರಿಯಲ್ಲಿ ಬಂದ ಸಾಮಾಜಿಕ ಚಿತ್ರಣವನ್ನು ಗಮನಿಸಿದಾಗ ಮರಾಠಿ ಬ್ರಾಹ್ಮಣ್ಯದ ಪ್ರಭಾವ ಎದ್ದು ಕಾಣುತ್ತದೆ. ಒಂದೆಡೆ ಕೆಂಚಣ್ಣ ರಾಜಶೇಖರನಿಗೆ ಹೇಳುವ ಮಾತನ್ನು ಗಮನಿಸಬಹುದು.

"........ ರಾಜ್ಯದಲ್ಲಿ ರೈತರಿಗೆ ತಿನ್ನಲು ಕೂಳಿಲ್ಲದಿದ್ದರೂ ಚಿಂತೆಯಿಲ್ಲ, ವೆಂಕಟೇಶ್ವರ ದೇವಾಲಯದಲ್ಲಿ ಬ್ರಾಹ್ಮಣ ಭೋಜನ ಮಾತ್ರ ನಡೆಸಿಯೇ ಇರುತ್ತಾರೆ. ತಮ್ಮ ಜಾತಿಯನ್ನು ಮಾತ್ರ ಅಧಿಕಾರ ಸ್ಥಾನಗಳಿಗೇರಿಸಿದ್ದಾರೆ. ಅವರ ಧರ್ಮಾಭಿಮಾನದ ಅನುಭವ ನಿನಗಂತೂ ಚೆನ್ನಾಗಿಯೇ ಇದೆ."

ಎನ್ನುವ ಮಾತಾಗಲೀ

".... ಮುಟ್ಟೇ ಮುಟ್ಟೇ ಸರಿ, ಅತ್ತ ಸರಿ ದೂರ, ದೂರ, ದೂರ ಹೋ ಚಲಾ ತಿಕಡ...."

ಎಂಬ ಮಾತುಗಳನ್ನು ಗ್ರಹಿಸಿದಾಗ ಅಲ್ಲಿ ಹಾಯ್ದು ಹೋಗುವ ಶೂದ್ರರಿಗೆಲ್ಲ ಯಾವ ಬಗೆಯ ಸ್ವಾಗತ ಸತ್ಕಾರ ಲಭಿಸುತ್ತಿತ್ತು ಎನ್ನುವುದು ವಿದಿತವಾಗುತ್ತದೆ.

ಇಲ್ಲಿ ಗ್ರಹಿಕೆಗೆ ಬರುವುದು ಮರಾಠಿ ಬ್ರಾಹ್ಮಣ ಮತ್ತು ಶೂದ್ರರ ನಡುವಿನ ವರ್ಣಭೇದದ ಕಂದಕ. ಮರಾಠಿ ಕನ್ನಡ ಭಾಷಾದ್ವಂದ್ವತೆ ಇವನ್ನೆಲ್ಲ ಮೀರಿ ಮಾತೃಭೂಮಿ ರಕ್ಷಣೆ ಬ್ರಿಟಿಷರ ವಿರುದ್ಧದ ಸಂಘಟನೆ ಕಾದಂಬರಿಯಲ್ಲಿ ಮೇಲ್ಪಂಕ್ತಿಯನ್ನು ಪಡೆದರೂ ಈ ಮೇಲ್ಪಂಕ್ತಿಗೆ ಕಾರಣವಾದ ಬಹುಜನರ ಸಾಂಸ್ಕೃತಿಕ ಸಂಬಂಧಗಳು, ಅಷ್ಟೇ ಮುಖ್ಯ. ಹೆಚ್ಚು ಪಾಲು ವಿಮರ್ಶೆ ಸಾಮಾಜಿಕ ಬದುಕನ್ನು ಗೌಣಗೊಳಿಸಿ ಪ್ರಭುತ್ವದ 'ಲೆಂಕ' ತನವನ್ನೇ ಪ್ರಧಾನವಾಗಿಸಿಕೊಂಡಿದ್ದೇ ಹೆಚ್ಚು.

'ಪೌರುಷ ಪರೀಕ್ಷೆ' ಕಾದಂಬರಿಯಲ್ಲಿನ ನಿರೂಪಣೆ ಪಾತ್ರಗಳ ಮುಖಾಂತರ ಸಾಗುವುದು ಒಂದು ವಿಶೇಷ.... ಆದರೆ ಪಾತ್ರಗಳೇ ಉತ್ತಮ ಪುರುಷದಲ್ಲಿ ಘಟನೆಗಳನ್ನು, ಅನುಭವಗಳನ್ನು ನಿರೂಪಿಸುವಲ್ಲಿ ಎಲ್ಲ ಪಾತ್ರಗಳಲ್ಲಿ ಒಂದೇ ನಿರೂಪಣೆಯಿದೆ. ಪಾತ್ರಗಳ ಸ್ವಭಾವದಂತೆ ಕಥನ ಕ್ರಿಯೆ ನಡೆದಿಲ್ಲ. ಇನ್ನೊಂದು ವಿಶೇಷ ಎಂದರೆ, ಕಥನ ಕ್ರಿಯೆ ನಡೆಯುವುದು ರಾಜ್ಯದ ಸಾಮಾನ್ಯ ಪ್ರಜೆಗಳ ಮಧ್ಯೆ. ಕಥೆ ರಾಜ ಮನೆತನದ್ದಾಗಿದ್ದರೂ ಆಳುವ ಮತ್ತು ಆಳಿಸಿಕೊಳ್ಳುವವರ ನಡುವಿನ ಅಂತರಗಳು ಸ್ಪಷ್ಟವಾಗಿ ಕಾದಂಬರಿಯಲ್ಲಿ ಭಾಗಪಡೆದಿವೆ. ಇದು ಕಟ್ಟೀಮನಿಯವರ ಬರವಣಿಗೆಯ ವೈಶಿಷ್ಟ್ಯಗಳಲ್ಲೊಂದು.

'ಪೌರುಷ ಪರೀಕ್ಷೆ' ಮತ್ತು 'ಸಂಗೊಳ್ಳಿ ರಾಯನಾಯಕ' ಕಿತ್ತೂರಿನ ಇತಿಹಾಸಕ್ಕೆ ಸಂಬಂಧಪಟ್ಟವುಗಳು, ಕಿತ್ತೂರಿನ ಸ್ವತಂತ್ರ ಅಸ್ತಿತ್ವದ ಪುನರ್ ಸ್ಥಾಪನೆ ಇವುಗಳ ಮುಖ್ಯ ಗುರಿ.

ಕಿತ್ತೂರಿನ ಪರಾಕ್ರಮಿ ರಾಜ ಮಲ್ಲಸರ್ಜ ತನ್ನ ಆಳ್ವಿಕೆ ಕಾಲದಲ್ಲೇ ಟಿಪ್ಪು ಸುಲ್ತಾನನ ಸೆರೆಯಾಳಾಗಬೇಕಾದ ಪ್ರಸಂಗ, ಸೆರೆಯಿಂದ ಹೊರಬಂದು ರಾಜ್ಯದ ಪುನರ್ ಸ್ಥಾಪನೆ ಕಾದಂಬರಿಯ ಸಂವಿಧಾನ.

ಮಲ್ಲಸರ್ಜ ಮತ್ತು ಮಡಿವಾಳ ಈ ಕಾದಂಬರಿಯ ಬಹು ಮುಖ್ಯ ಪಾತ್ರಗಳು. ಕುಂಬಾರ ಶಿವಪ್ಪರಾಮಪ್ಪನ ಮಗನಾದ ಈತ ರಾಜ್ಯದ ಸಾಮಾನ್ಯ ಪ್ರಜೆ. ತನ್ನ ಚಾಣಾಕ್ಷ

ತನ, ಸ್ವಾಮಿನಿಷ್ಠೆಗಳಿಂದ ರಾಜನಿಗೆ ಹತ್ತಿರದವನಾಗಿರುತ್ತಾನೆ. ರಾಜ್ಯದ ಆಧಾರ ಸ್ತಂಭವಾಗುತ್ತಾನೆ. ಹೀಗೆ ಕಾದಂಬರಿ ಉದ್ದಕ್ಕೂ ಕಟ್ಟೀಮನಿ ಪಾತ್ರಗಳ ಸ್ವಾಭಿಮಾನ, ಸ್ವಾತಂತ್ರ್ಯ ಪ್ರೇಮ ಮುಂತಾದ ಸದ್ಗುಣಗಳನ್ನು ಚಿತ್ರೀಕರಿಸುವುದರಲ್ಲಿ ವ್ಯಕ್ತಿತ್ವದ ಅರೆಕೊರೆಗಳನ್ನು ಸ್ಫುಟವಾಗಿ ಬಿಡಿಸಿ ತೋರಿಸುತ್ತಾರೆ. ಇಲ್ಲಿ ಬಹು ಮುಖ್ಯವೆನಿಸುವುದು 'ಸಾಮೂಹಿಕ ಜಾಗ್ರತಿ'ಯ ಕಳಕಳಿ. ಅದು ಲೇಖಕರ ಆಶಯ ಕೂಡ.

'ಸಂಗೊಳ್ಳಿರಾಯ ನಾಯಕ' ಕಿತ್ತೂರಿನ ಇತಿಹಾಸದ ಕೊನೆಗಳಿಗೆಯ ಘಟನೆಗಳ ಚಿತ್ರಣವಾಗಿದೆ. ಚೆನ್ನಮ್ಮನ ಬಂಧನದ ನಂತರ ಅವಳ ಅನುಯಾಯಿಗಳ ಹೋರಾಟದ ಕಥೆ ಇದು. ಕೂಟಯುದ್ಧ ಮರಸುದಾಳಿಗಳಿಂದ ಇಂಗ್ಲೀಷರಿಗೆ ಸಿಂಹಸ್ವಪ್ನನಾಗಿದ್ದ 'ರಾಯ' ಯಾವ ಸಂಸ್ಥಾನಿಕನಾಗಲೀ ಶ್ರೀಮಂತನಾಗಲೀ ಆಗಿರಲಿಲ್ಲ. ಒಬ್ಬ ಅಣ್ಣ, ತಾಯಿ ಇವರ ಜೀವನಕ್ಕಾಗಿ ಶ್ರಮಜೀವಿಯಾಗಿ ಬದುಕುತ್ತಿದ್ದ ಬಡರೈತ. ಸಾಮಾನ್ಯರಿಂದ ಮೇಲೆದ್ದು ಬಂದ ಈ ನಾಯಕನ ಕಥೆ, ಕಾದಂಬರಿಯಲ್ಲಿ ತುಂಬ ಸೂಕ್ಷ್ಮವಾಗಿ ಮೂಡಿದೆ.

ದೇಶ ಪ್ರೇಮಿಯಾದ ಈತ ಸ್ವತಃ ಸೈನ್ಯ ಸಂಘಟಿಸಿ ಕಿತ್ತೂರಿನ ಮರು ಅಸ್ತಿತ್ವಕ್ಕಾಗಿ ಹೋರಾಡುತ್ತಾನೆ. ಆದರೆ ದುರ್ದೈವ, ವಸಾಹತುಶಾಹಿಯ ದೈತ್ಯ ಶಕ್ತಿಯ ಎದುರು ಈತನ ಸಂಘಟನೆ ಫಲಕಾರಿಯಾಗಲಿಲ್ಲ. ಕಾರಣ ಗೌಡರಂಥ ಅಧಿಕಾರ ಲಾಲಸೆಯುಳ್ಳವರ ಎದುರು, ಜೀಹುಜೂರ್ ಎನ್ನುವ ಪ್ರವೃತ್ತಿಯ ಅಧಿಕಾರಿಗಳ ನಡುವೆ, ದುರ್ಬಲ ಪ್ರಭುವರ್ಗದ ವಂಶಜರು, ಬ್ರಿಟಿಷರ ಪರವಾದ ಮಂತ್ರಿ ಅಧಿಕಾರಿಗಳ ಪಿತೂರಿ ಗಾರರ ಇವರೆಲ್ಲರ ನಡುವೆಯೂ ರಾಯ ಸೈನ್ಯ ಕಟ್ಟುವ ಕಾರ್ಯ ಮಾಡಬೇಕಿತ್ತು. (ಪ್ರೊ.ಎಂ.ಹೆಚ್. ಕೃಷ್ಣಯ್ಯ ೧೯೯೨:೪೦೦) ಇಲ್ಲಿ ಪ್ರಜಾ ಹಿತಕ್ಕಾಗಿ ಹೋರಾಟ ನಡೆದರೂ ಅದು ವ್ಯವಸ್ಥಿತ ಅಧಿಕಾರ ಲಾಭಿಯ ಮುಂದೆ ನಿಲ್ಲದೆ ಹೋಗುತ್ತದೆ. ಕೊನೆಗೆ ರಾಯನ ಗಲ್ಲು ಶಿಕ್ಷೆಯೇ ನಡೆಯುತ್ತದೆ.

ಹಾಗಂತ ಎಲ್ಲವೂ ವಿಫಲವಾಗಿ ದುರಂತವೇ ಕೊನೆಯ ಮಾರ್ಗವೆಂದು ತೀರ್ಮಾನಕ್ಕೆ ಬಂದುಬಿಡಬೇಕಾದ್ದಿಲ್ಲ. ಮೂರು ಕಾದಂಬರಿಗಳಲ್ಲಿ ಸಂಸ್ಥಾನಗಳ ಉಳಿವಿಕೆಗಾಗಿ ನಡೆಯುವ ಹೋರಾಟಗಳನ್ನು ಕಾಣುತ್ತೇವೆ. ಈ ಹೋರಾಟಗಳು ತುಂಬಾ ಸಾಂಕೇತಿಕವಾದಂಥವು. ಕಾಲಗರ್ಭದಲ್ಲಿ ಎಲ್ಲವೂ ನಾಶವಾಗಿ, ಹುದುಗುವುದು ಸಹಜ ಧರ್ಮ. ಇಲ್ಲಿ ಸಂಸ್ಥಾನಗಳ ನಾಶ, ಹೋರಾಟ ಕೇವಲ ನಿಮಿತ್ತ ಮಾತ್ರ. ಇದು ಹೊಸ ಬಗೆಯ ಅವಿಷ್ಕಾರದ ಮುನ್ಸೂಚನೆ ಎಂದೇ ಹೇಳಬೇಕು.

ರಾಯನಾಯಕ ಕಾದಂಬರಿಯಲ್ಲಿ ಬಿಚ್ಚುಗತ್ತಿ ಚನ್ನಬಸಪ್ಪ ರಾಯನ ಸಮಾಧಿಯ ಮೇಲೆ ಸಸಿಯೊಂದನ್ನು ನೆಡಬೇಕೆಂದು ಆಸೆಪಡುವ ಚಿತ್ರ ಮಾನವ ಬದುಕಿಗೆ ಹೋರಾಟಕ್ಕೆ ಮಾನವೀಯ ಮೌಲ್ಯಗಳ ಉಳಿವಿಕೆಗೆ ಇಂಥ ತ್ಯಾಗ ನಿರರ್ಥಕವಲ್ಲ ಎಂಬ ಸೂಚನೆಯನ್ನು ಕಟ್ಟಿಕೊಡುತ್ತದೆ. ಇದು ಚಾರಿತ್ರಿಕ ಕಾದಂಬರಿಗಳ ಚಿರಂತನತೆಯ ಅಂಶವಾಗಿದೆ.

೩

ಇನ್ನು ವರ್ಣ ಮತ್ತು ವರ್ಗ ಸಂಘರ್ಷ ಪ್ರಧಾನವಾಗುಳ್ಳ ಕಾದಂಬರಿಗಳನ್ನು ಇಲ್ಲಿ ಎತ್ತಿಕೊಳ್ಳಬಹುದು. "ನೀ ನನ್ನ ಮುಟ್ಟಬೇಡ"ದಲ್ಲಿ ಎರಡು ಭಾಗಗಳಿವೆ. ಮೊದಲನೆಯದು 'ತಾಯಿ' ಎರಡನೆಯದು 'ಮಗ' ಇದನ್ನೇ ತಯಾರಿ ಮತ್ತು ಕ್ರಿಯೆ ಎಂದು ಕರೆದರೂ ಸರಿಹೋಗುತ್ತಿತ್ತು. ಮೊದಲನೇ ಭಾಗ ಹರಿಜನರ ಬಡತನ ಬಳಲಿಕೆ, ಅನಕ್ಷರತೆ, ದೈವವಾದ  ಒಟ್ಟಾರೆಯಾಗಿ ಶೋಷಣಾ ಮೂಲವನ್ನು ವಿಶ್ಲೇಷಿಸುತ್ತ ಸಂಘರ್ಷದ ದಾರಿಯನ್ನು ರೂಪಿಸುತ್ತದೆ. (ಆರ್.ವಿ.ಭಂಡಾರಿ ೧೯೯೩:೩೧೪)

ಕಾದಂಬರಿಕಾರರು ಹೊಲೆಯರ ಬಾಳಿನ ಕೊಳೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಆ ಹೊಲಸಿಗೆ ನಮ್ಮ ಸಮಾಜ ಹೆಚ್ಚಿನ ಹೊಣೆ ಎಂಬುದನ್ನು ಕೆಣಕಿ ಕೆಣಕಿ ಹೇಳಿದ್ದಾರೆ. ಹೊಲೆಯರ ಬಾಳು ಬರಿ ಕೀಳು, ಅದರಿಂದ ಅವರನ್ನು ಉದ್ಧರಿಸುವುದಕ್ಕೆ ಮಹಾತ್ಯಾಗ ಬೇಕು ಎಂಬುದನ್ನು ಮಾರ್ಮಿಕವಾಗಿ ಮಹಾದೇವನಂಥ ಪಾತ್ರದ ಮೂಲಕ ಮೂಡಿಸಿದ್ದಾರೆ. ಅಂತು, ಸವರ್ಣೀಯರನ್ನು, ಹೊಲೆಯರ ಬಾಳನ್ನು ಕುರಿತ ಸಹಜ ಸುಂದರ ಕಾದಂಬರಿ 'ನೀ ನನ್ನ ಮುಟ್ಟಬೇಡ' ಎಂದು ಗುಂಡ್ಮಿ ಚಂದ್ರಶೇಖರ ಐತಾಳರು ಹೇಳುತ್ತಾರೆ (೧೯೬೯:೨೨೩).

ಮೇಲಿನ ಎರಡೂ ಹೇಳಿಕೆಗಳನ್ನು ಗಮನಿಸಿದಾಗ ಮೊದಲದರಲ್ಲಿ ಹೊಲೆಯರ ಸ್ಥಿತಿಗತಿ ಬಗ್ಗೆ ತೀವ್ರ ಕಳಕಳಿ ಇದೆ. ಅದು ವರ್ಣಮೂಲ ಹಿನ್ನೆಲೆಯಲ್ಲಿ ಬಿಚ್ಚಿಕೊಂಡಿದೆ. ಎರಡನೆಯದರಲ್ಲಿ ಹೊಲೆಯರ ಬಾಳಿನ ಘೋರತೆಯನ್ನು ಹೇಳುವ ವೈಭವೀಕರಣವಿದೆ.

ಹೊಲೆಯರು ಮತ್ತು ಉಚ್ಚ ವರ್ಗದವರು ಇವರ ಮಧ್ಯದ ಸಂಘರ್ಷಯುತ ಬದುಕಿನ, ಶೋಷಣಾ ಮೂಲ ವಿಶ್ಲೇಷಣೆ ಇಲ್ಲಿದೆ. ಬಹುಮುಖ್ಯವಾಗಿ ಇಲ್ಲಿ ಎದ್ದು ಕಾಣುವ ಅಂಶ ಎಂದರೆ ಗಾಂಧೀ ತತ್ವಗಳ ತೀವ್ರ ವಿಮರ್ಶೆ. ಗಾಂಧೀಜಿಯ ಆಶೀರ್ವಾದದಿಂದ ಸ್ಥಾಪಿತವಾದ ಚನ್ನಪ್ಪನ ವಿದ್ಯಾರ್ಥಿನಿಲಯ ಭ್ರಷ್ಟ ವ್ಯವಸ್ಥೆಗೆ ಹೇಗೆ ಆಕರವಾಗಿದೆ ಎಂಬುದು ಹರಿಜನರನ್ನು ಉದ್ಧಾರ ಮಾಡುತ್ತೇವೆ ಎಂದು ಹೊರಟ ಚನ್ನಪ್ಪ - ಚಂಪಾವತಿಯರು ಹೊಲೆಯರಿಗಿಂತ ಕೀಳಾಗಿ ಬಾಳುವುದು. ಇವು ಗಾಂಧೀವಾದಿಗಳೂ ಮತ್ತು ಗಾಂಧೀ ಪ್ರಣೀತ ಹರಿಜನೋದ್ಧಾರದ ಇತಿ ಮಿತಿಗಳನ್ನು ಹೇಳುತ್ತದೆ. ಇದೂ ಅಲ್ಲದೆ ಹರಿಜನೋದ್ಧಾರ ಮಾಡಬೇಕೆಂದು ಪಣತೊಟ್ಟ ಮಹಾದೇವ ಅಪ್ಪಟ ಗಾಂಧೀವಾದಿ. ಭ್ರಷ್ಟ ವ್ಯವಸ್ಥೆ ಕಂಡು ಆತ ಕೆರಳುವುದು ಗಾಂಧೀ ತತ್ವದ ಮಿತಿಗಳನ್ನು ಹೇಳುತ್ತದೆ.

'ಬೆಳಗಿನ ಗಾಳಿ' ವರ್ಣ ಮುಖೇನ ಉಂಟಾದ, ಜಾತಿ ಭೇದದಿಂದುಂಟಾದ ದುಷ್ಪರಿಣಾಮವನ್ನು ಹೋಗಲಾಡಿಸಿಕೊಳ್ಳಲು ನಡೆಸುವ ಹಿಂದುಳಿದ ಜಾತಿಗಳ ಜನರಲ್ಲೆ

ಉಂಟಾದ ಜಾಗ್ರತ ಪ್ರಜ್ಞೆಯ ಹೋರಾಟದ ಆಧಾರದ ಚಿತ್ರಣ (೧೯೯೩:೩೨೯) ಎಂದು ಆರ್.ವಿ.ಭಂಡಾರಿ ಹೇಳುತ್ತಾರೆ.

ಅಸ್ಪೃಶ್ಯರಿಗಿಂತಲೂ ಕೆಳಸ್ತರದಲ್ಲಿ ಬದುಕುತ್ತಿದ್ದ ಕಳ್ಳಕೇರಿಯ ಜನರ ದಾರುಣ ಚಿತ್ರಣ ಕೊಡುವ ಕಾದಂಬರಿ ವಿಶಿಷ್ಟವೆನಿಸಿದೆ. ಉತ್ತರ ಕರ್ನಾಟಕದ ಹಳ್ಳಿಯ ಮಾತಿನಲ್ಲಿ ನಡೆವ ಕಾದಂಬರಿ ಕಳ್ಳಕೇರಿಯ ಸೂಳೆಯರು, ಮೋಸದ ಸಾಹುಕಾರರು, ನಿರ್ಗತಿಕ ಸ್ಥಿತಿಯಲ್ಲಿನ ಬಡವರು, ರೋಗಿಗಳು, ಮುಂತಾದ ಪಾತ್ರಗಳು ಕಟ್ಟೀಮನಿಯವರ ಕುಂಚದಲ್ಲಿ ವಿನೂತನ ಕಲಾತ್ಮಕತೆಯನ್ನು ಗಳಿಸಿವೆ.

'ನೀ ನನ್ನ ಮುಟ್ಟಬೇಡ' ಕಾದಂಬರಿ ಮಹಾದೇವನಂತೆ ರಾಜ ಕೆಳಜಾತಿಯಲ್ಲಿ ಹುಟ್ಟಿ ಬೆಳೆದವ. ಮುಗ್ಧ ವಯಸ್ಸಲ್ಲೇ ವರ್ಣ ವೈಶಮ್ಯದ ಅನುಭವ ಪಡೆಯುತ್ತಾನೆ. ವಿದ್ಯಾವಂತನಾಗಿ, ತ್ಯಾಗ ಮಮತೆಯಿಂದ ಕಳ್ಳಕೇರಿಯ ಕತ್ತಲು ಸರಿಯಲು ಹೋರಾಡುತ್ತಾನೆ. ಕೊನೆಗೂ ಗೆಲ್ಲುತ್ತಾನೆ. ಕೇರಿಯಲ್ಲಿ.'ಬೆಳಗಿನ ಗಾಳಿ' ಸುಳಿಯುತ್ತದೆ. ಈ ಹಿನ್ನೆಲೆಯಲ್ಲಿ ಭಂಡಾರಿಯವರ ಮಾತು ಪ್ರಸ್ತುತವೆನಿಸುತ್ತದೆ.

ಕಟ್ಟೀಮನಿಯವರ 'ಹರಿಜನಾಯಣ' ದಲಿತ ಬಂಡಾಯ ಕಾದಂಬರಿಗಳ ತಾತ್ವಿಕತೆಯನ್ನೇ ಮೈಗೂಡಿಸಿಕೊಂಡು ಬಂದಿದೆ. ಪ್ರಬುದ್ಧ ರಾಜಕೀಯ ಪ್ರಜ್ಞೆಯುಳ್ಳ ಲೇಖಕ ಸಮಕಾಲೀನ ರಾಜಕೀಯ ಸಾಮಾಜಿಕ ಜೀವನದ ವಾಸ್ತವಿಕ ಚಿತ್ರವೊಂದನ್ನು ಇಲ್ಲಿ ನೀಡಲು ಪ್ರಯತ್ನ ಮಾಡಿದ್ದಾರೆ ಎನ್ನುತ್ತಾರೆ ಆರ್.ಕೆ. ಮಣಿಪಾಲ (ಸಂಕ್ರಮಣ ೧೯೯೦: ೨೦೪ ಮೇ ಸಂಚಿಕೆ).

ಅವರ್ಣೀಯರೆನಿಸಿಕೊಂಡವರೆಲ್ಲ ಒಟ್ಟಾಗಿ ಶೋಷಣೆಯ ವಿವೇಚನೆಗಾಗಿ ಅರಿವಿನಿಂದ ಹೋರಾಟಕ್ಕೆ ಸಿದ್ಧವಾಗೋದು ಈ ಕಾದಂಬರಿಯ ಮೂಲ ಪ್ರೇರಣೆ. ಶಂಭುನಂಥ ಯುವಕ ಮೇಲ್ಜಾತಿಯವರಲ್ಲಿ ಏಳುವ ಆತಂಕಗಳನ್ನು ಎದುರಿಸುತ್ತಾನೆ. ಇಂಥ ಸಂದಿಗ್ಧ ಸ್ಥಿತಿಗಳನ್ನು ಹೇಳುವುದು ಕಟ್ಟೀಮನಿಗೆ ಮಾತ್ರ ಸಾಧ್ಯವೆಂಬ ಸೂಕ್ಷ್ಮ ಕೂಡ ಇಲ್ಲಿ ತಲೆ ಎತ್ತುತ್ತದೆ. ಪ್ರಸಕ್ತ ಸ್ಥಿತಿಯ ಪ್ರಜ್ಞೆಯುಳ್ಳ ಲೇಖಕ ಮಾತ್ರ ಈ ರೀತಿ ಬರೆಯಲು ಸಾಧ್ಯ.

ಮೇಲಿನ ಕಾದಂಬರಿಗಳಲ್ಲಿ ದಲಿತ ವರ್ಗದ ಬಗೆಗಿನ ಕಟ್ಟೀಮನಿಯವರ ಎಲ್ಲಿಲ್ಲದ ಕಾಳಜಿಗಳನ್ನು ಕಾಣುತ್ತೇವೆ. ಅದು ಸಮರ್ಥ ಅಭಿವ್ಯಕ್ತಿಯನ್ನು ಪಡೆಯುವ ಮೂಲಕ ಕಾದಂಬರಿಗಳಲ್ಲಿ ವಸ್ತು ಸ್ಥಿತಿಯನ್ನು ಕಣ್ಣಿಗೆ ಹೊಡೆಯಿಸುತ್ತದೆ.

'ಶಿವದಾರ- ಜನಿವಾರ' ವರ್ಗ-ವರ್ಣ ಭಾವನೆಯ ಬ್ರಾಹ್ಮಣ- ಲಿಂಗಾಯತ ಈ ವಿಕೃತಿಗಳು ವ್ಯಕ್ತಿ ನೆಲೆಯಿಂದ ಹುರಿಗೊಂಡು ಸಮಾಜದ ಸಾಂಘಿಕ ಜೀವನದಲ್ಲಿ ಕ್ರಿಯೆ- ಪ್ರತಿಕ್ರಿಯೆಗಳ ಮೂಲಕ ಪ್ರಕಟವಾಗುವುದು ಇಲ್ಲಿನ ಮುಖ್ಯ ಕಾಣ್ಕೆ.

ಆರ್.ವಿ. ಭಂಡಾರಿ ಗುರುತಿಸುವಂತೆ

ಇಲ್ಲಿ ವರ್ಣವಾಗಲೀ, ವರ್ಗವಾಗಲೀ ಸಂಘರ್ಷದ ರೂಪ ಪಡೆದಿಲ್ಲ. ಆದರೆ ನಿತ್ಯಜೀವನದ ಒಳತೋಟಿಯಲ್ಲಿ ತಿಕ್ಕಾಟ ನಡೆದೇ ಇದೆ. ಆ ತಿಕ್ಕಾಟವೂ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಇಲ್ಲಿ ದೊಡ್ಡ ಮಟ್ಟದಲ್ಲಿ ಸ್ಥಾಪಿತವಾಗಿದ್ದರೂ ಇಲ್ಲಿಯ ಕಿರು ಚೌಕಟ್ಟಿನಲ್ಲಿ ಸಂಘರ್ಷ ವರ್ಗ-ವರ್ಣ ಎರಡೂ ರೂಪ ಪಡೆಯುತ್ತದೆ. ವರ್ಗ ಹೋರಾಟದ ಗೈರು ಹಾಜರಿಯಲ್ಲಿ ಅದು ವರ್ಣ ತಿಕ್ಕಾಟವಾಗಿ ವ್ಯಕ್ತಿಗಳನ್ನು ಕಾಡುವ ಒಂದು ನೋಟ ಚಿತ್ರಿತವಾಗಿದೆ. ಬಡತನ, ವರ್ಣಮೂಲವಾದ ಸ್ಥಿತಿ, ಎಲ್ಲ ವರ್ಣೀಯರಿಗೆ, ಸರಿಸಮ ಇದ್ದಾಗಲೂ ಅದನ್ನು ಮಂದಗೊಳಿಸಲು ಅಥವಾ ಹೊರಗೆ ಹಾಕಲು ವರ್ಣ ಇಲ್ಲಿ ಒಂದು ಅಮೂರ್ತ, ಆದರೆ ಸಶಕ್ತ ಸಾಧನವಾಗಿದೆ ಎಂಬುದನ್ನು ಕಾದಂಬರಿ ಸಾಧಿಸುತ್ತದೆ. ಕಾದಂಬರಿಯ ಸೀಮಿತ ಚೌಕಟ್ಟಿನಲ್ಲಿ ಮತ್ತು ಕಥಾ ಸಂವಿಧಾನ ವಿನ್ಯಾಸದಲ್ಲೇ ಸಮಸ್ಯೆಗೆ ತನ್ನದೇ ಆದ ಪರಿಹಾರವನ್ನು ಕಂಡುಕೊಳ್ಳುತ್ತದೆ.”

ಜನಿವಾರ ವರ್ಗದ ಶಾಂತಾ, ಶಿವದಾರ ವರ್ಗದ ಸದಾನಂದ ಪರಸ್ಪರ ಆಕರ್ಷಿತರಾಗಿದ್ದರು. ಶಾಂತಾ ಸುಗುಣಿ, ಆದರೆ ಬಡವಳು ; ಸದಾನಂದ ಸುಸಂಸ್ಕೃತ. ಆದರೆ ಜಾತಿಯಲ್ಲಿ ಅನ್ಯ. ಈ ವಿಷವೃತ್ತ ಅವರ ಬದುಕನ್ನು ಹೇಗೆ ಸತಾಯಿಸುತ್ತದೆಂಬುದು ಕಾದಂಬರಿಯ ಆಮೂಲಾಗ್ರ ಚಿಂತನೆ. ವ್ಯಕ್ತಿನೆಲೆಯ ಆಕಾಂಕ್ಷೆಗಳು ವ್ಯಷ್ಠಿ ನೆಲೆಯಲ್ಲಿ ಚಾಚಿಕೊಂಡು ನಡೆಸುವ ಪ್ರತಿರೋಧಗಳು, ಕೊನೆಗೂ ವ್ಯಕ್ತಿ ಅದನ್ನು ಮೀರಿ ತನ್ನ ಗುರಿಸಾಧಿಸುವುದು, ಹಣದ ಪ್ರಪಂಚದ ಚೆಲ್ಲಾಟ, ಇವು ಕಾದಂಬರಿಯ ಒಳ ನೋಟಗಳು. “ಒಂದು ಹೂವನ್ನು ಪ್ರೀತಿಸುವಂತೆ ನಾನು ಅವಳನ್ನೇ ಪ್ರೀತಿಸುತ್ತೇನೆ. ಅದನ್ನು ಹಿಡಿದು ಹಿಸುಕುವಂಥ ಹೀನ ಮನಸ್ಸು ನನ್ನದಲ್ಲ” ಎನ್ನುವ ಸದಾನ ಮಾತು ಅವರ ಅಮರ ಪ್ರೇಮಕ್ಕೆ ಸಾಕ್ಷಿ. ಜಾತಿ ರಹಿತ ಪ್ರೀತಿ ಅವರದು. ಕಾಲದಿಂದಲೂ ಹೆಣ್ಣಿಗೆ ಹಾಕಿಟ್ಟ ಚೌಕಟ್ಟನ್ನು ಜಾತಿಯ ಟೊಳ್ಳುತನವನ್ನು ಕಾದಂಬರಿ ಮೀರಿ ಹೊಸ ದಿಂಗತದತ್ತ ಚಲಿಸಲು ಸಹಾಯ ಮಾಡುತ್ತದೆ. ಸ್ತ್ರೀ ಸಮಾಜದಲ್ಲಿ ವಿಚಾರ ಪ್ರಚೋದನೆ ಮಾಡುವ ಮೂಲಕ ಬೇಕು ಬೇಡಿಕೆಗಳು ಚಿಂತನೆಯನ್ನು ಮಾಡಹಚ್ಚುತ್ತದೆ. ವರ್ಗ ಪ್ರಜ್ಞೆಯ ಖಾಲಿತನದಲ್ಲಿ ಇಲ್ಲಿನ ಗತಿ ವರ್ಣಪರತೆಯನ್ನು ಪ್ರತಿನಿಧಿಸುವುದು ತುಂಬ ಕುತೂಹಲಕರವಾಗಿ ಮೂಡಿಬಂದಿದೆ.

‘ಬೀದಿಯಲ್ಲಿ ಬಿದ್ದವಳು’ ಕಥೆ ಇನ್ನಷ್ಟು ಹಿಗ್ಗಬೇಕಾಗಿತ್ತು. ಇನ್ನಷ್ಟು ಏರಬೇಕಾಗಿತ್ತು. ನಿಜ. ‘ಮೋಹದ ಬಲೆಯಲ್ಲಿ’ಯ ಮಟ್ಟಕ್ಕೆ ಅದು ಏರುವುದಿಲ್ಲ ಎಂಬುದೂ ನಿಜವೇ. ಆದರೆ ಆ ಮಟ್ಟವೇ ಯಾವಾಗಲೂ ಹೇಗೆ ಸಿಕ್ಕೀತು? ಆದರೆ ಕಥೆ ಸ್ವಾರಸ್ಯವಾಗಿದೆ. ಹೇಳುವ ರೀತಿ ಹೊಸದಾಗಿದೆ. ಕಥೆ ಭೇದಿಸಿಕೊಂಡು ಹೋಗುತ್ತದೆ. ಎಂದು ಅಡಿಗರು ೨೩.೩.೧೯೫೩ರಲ್ಲಿ ಕಟ್ಟೀಮನಿಯವರಿಗೆ ಬರೆದ ಪತ್ರದಲ್ಲಿ ಹೇಳಿದ್ದಾರೆ. (ಉದ್ಧೃತ ೧೯೮೧, ೨೭೪).

ಮೂಲ ಕಾಳಜಿಯೇ ಮಾಯವಾಗಿ ಭಾವುಕತನದ ವೈಭವೀಕರಣ ಅಡಿಗರ ಮೇಲಿನ ಮಾತಿನಲ್ಲಿ ಸ್ಪಷ್ಟವಾಗುತ್ತದೆ. 'ಬೀದಿಯಲ್ಲಿ ಬಿದ್ದವಳು' 'ಖಾನಾವಳಿಯ ನೀಲಾ' 'ಗ್ರಾಮ ಸೇವಿಕಾ', 'ಪ್ರಪಾತ', 'ಪಾತರಗಿತ್ತಿ', 'ದ್ರೋಹಿ', 'ಪ್ರಿಯ ಬಾಂಧವಿ', 'ಗೆಳೆಯನ ಮಡದಿ', 'ಜೊತೆಗಾತಿ' 'ಗೋವಾದೇವಿ' ಮುಂತಾದ ಕಾದಂಬರಿಗಳ ಸ್ಥಾಯಿ ಕಾಮ. ಆ ಮೂಲಕ ಹಾಗೆ ವ್ಯಕ್ತಿಯ ವೈಯಕ್ತಿಕ ತೆವಲುಗಳ, ವೇಶ್ಯಾ ಸಮಸ್ಯೆಯ ಕರಾಳ ಮುಖಗಳನ್ನು ಇವು ಚಿತ್ರಿಸುತ್ತವೆ. ಹಾಗೆ ಬದುಕಿನ ಜಟಿಲತೆಯ ಅನಿರೀಕ್ಷಿತ ಸುಳಿವುಗಳನ್ನೂ ಕಟ್ಟಿಕೊಡುತ್ತವೆ.

ಸಾಮಾಜಿಕ ಅಥವಾ ನೈತಿಕ ಭಯದ ಹಂಗಿಲ್ಲದೆ ಸಲೀಸಾಗಿ ಕಾಮಕೇಳಿಯಲ್ಲಿ ಮಗ್ನವಾಗುವ ಎಲ್ಲ ಪಾತ್ರಗಳು ಕಾಮದ ಅದಮ್ಯತೆಯನ್ನು ಸಾರುತ್ತವೆ. ಆದರೂ ಜೊತೆಯಲ್ಲಿ ಸಮಾಜ ಗರ್ಭದಲ್ಲಿ ಹುದುಗಿದ್ದ ನಿಷ್ಕರುಣೆ, ಕ್ರೌರ್ಯ, ದಾಹ, ನೀಚತನಗಳನ್ನು, ಲಾಯರುಗಳು, ಸಮಾಜ ಸೇವಕರು, ಮಹಿಳಾ ಮಂಡಲದ ಶಿಶು ವಿಹಾರದ, ಆಸ್ಪತ್ರೆ ನರ್ಸುಗಳು, ಅಧ್ಯಾತ್ಮ ಪ್ರಿಯರಂಥ ಪಾತ್ರಗಳ ಮುಖಾಂತರ ಒತ್ತಿ ತೋರಿಸುವುದು ಕಾದಂಬರಿಯ ಸಂಪೂರ್ಣತೆಗೆ ಸಹಾಯಕವಾಗಿದೆ. ಕಟ್ಟೀಮನಿಯವರ ಕೃತಿಗಳ ಗಟ್ಟಿತನವಿರುವುದು ಇಲ್ಲಿಯೆ.

'ಮಣ್ಣು ಮತ್ತು ಹೆಣ್ಣು'- ಹಿಂದಿನ ಕಾದಂಬರಿಗಳಲ್ಲಿ ಹೆಣ್ಣು ಮುಖ್ಯ ಸಮಸ್ಯೆಗೆ ಕಾರಣವೆನಿಸಿದರೆ ಇಲ್ಲಿ 'ಮಣ್ಣು' ಮತ್ತು 'ಹೆಣ್ಣು' ಎರಡೂ ಕಾರಣವಾಗಿವೆ. ಕಾದಂಬರಿಯ ಕ್ರಿಯೆಯಲ್ಲ ಹಳ್ಳಿಯಲ್ಲೇ ನಡೆಯುವಂಥದ್ದು. ವಂಶಪಾರಂಪರ್ಯವಾಗಿ ಬಂದ ಮರಡಿ ಕೆಳಗಿನ ಹೊಲ ಭೀಮಣ್ಣನ ಕೈ ಬಿಟ್ಟು ಹೋಗುವುದು. ಸೊಸೆ ಬಾಲಿ ಕಾದಂಬರಿಯ ಸಂಘರ್ಷದ ಕೇಂದ್ರ ಬಿಂದು. ಬಾಲಿ ಸೂಳೆಯಾಗಿ ಸಾಧ್ವಿಯಾಗುವ ಸ್ಥಿತಿ ಮನುಷ್ಯ ದಾರಿ ತಪ್ಪಿದರೂ ಮನಸ್ಸು ಮಾಡಿದರೆ ಒಳ್ಳೆಯವನಾಗಬಲ್ಲ ಎಂಬುದಕ್ಕೆ ಸಾಕ್ಷಿ.

ನವನಾಗರೀಕತೆಯ ಭ್ರಷ್ಟ ರಾಜಕೀಯ ಕೊಳಕುತನಗಳ ಹೆಂಡ-ಹೆಣ್ಣುಗಳ ಸಹವಾಸದಿಂದ ಗಬ್ಬೆದ್ದು ಹೋಗುತ್ತಿರುವ ಗ್ರಾಮಜೀವನದ ವಿಕೃತ ಚಿತ್ರಣವಿದೆ. ಇದ್ದ ಭೂಮಿಯನ್ನು ಕಳೆದುಕೊಂಡು ಪಡುವ ಬರ್ಭರ ಸ್ಥಿತಿ. ಆಸ್ತಿಗಾಗಿ ಏನೆಲ್ಲ ಮಾಡುವ, ಹೆಣ್ಣಿನ ಸಂಗಕ್ಕಾಗಿ ಎಳೆಸುವ, ಅದಕ್ಕಾಗಿಯೇ ನಡೆಸುವ ಮೇಲಾಟಗಳು, ಈ ಮಧ್ಯೆ ಅಮಾಯಕರು ಪಡುವ ಯಾತನೆ ಕಾದಂಬರಿಯಲ್ಲಿ ನಿವ್ವಳ ಆಕಾರ ಪಡೆದಿವೆ.

'ಹೆಂಡತಿ' ಕಾದಂಬರಿಯಲ್ಲಿ ತಾಯಿ-ಮಗ, ಅತ್ತೆ-ಸೊಸೆ, ತಾಯಿ-ಮಗ - ಸೊಸೆ ಇವರ ಮಧ್ಯದ ವೈರುಧ್ಯಗಳ ವಾಸ್ತವತೆಯನ್ನು ಕಾಣುತ್ತೇವೆ. ತಾಯಿಯೇ ಕುಳಿತು ಮಗ ಮತ್ತು ಸೊಸೆಯರ ಬಾಳು ಹಾಳು ಮಾಡುವ ಅವಿವೇಕತನವಿದೆ.

'ಸೈತಾನ' ಕಳೆದುಹೋದ ಬದುಕನ್ನು ಅರಸಿ ಬಂದಾಗ ಅನಿರೀಕ್ಷಿತ ಘಟನೆಗಳನ್ನು ಎದುರಿಸಿ ಬದುಕುವ ವಾಸ್ತವವನ್ನು ಕಾಣುತ್ತೇವೆ. ಸಂಪೂರ್ಣ ಹಳ್ಳಿ ಪರಿಸರದಲ್ಲಿ ತಿರುಗುವ ಕಾದಂಬರಿ ಮುಖ್ಯವಾಗುವುದು ತಾಯಿ ಬಿಟ್ಟು ಹೋದ ಚಿಕ್ಕ 'ಮನೆ'ಗಾಗಿ ಯಮುನೆಯು

ಇದಕ್ಕಾಗಿ ಮಾಡುವ ಮಸಲತ್ತು. ತನ್ನ ಮೈಮಾಟ ಒನಪು ಒಯ್ಯಾರ ಗಡಸುತನಗಳಿಂದ ಇಡೀ ಅಧಿಕಾರ ವರ್ಗವನ್ನೇ ಆಟ ಆಡಿಸುವ ದುಷ್ಟಳು. ಸೈತಾನ ಮನೆ ಬೇಕೆಂದು ಕೇಳಿದಾಗ 'ಅದನ್ನು ಹೇಗೆ ಪಡೆಯುತ್ತೀ ಪಡಿ ನಾನು ನೋಡೇ ಬಿಡ್ತೀನಿ' ಸೈತಾನ ಕಲಿತವನಾದರೂ ಮಾಜಿ ಮಿಲಿಟರಿ ನೌಕರನಾದರೂ ನಿರಕ್ಷರಿ ಯಮುನಾಳ ಮುಂದೆ ತನ್ನ ಆಸ್ತಿ ದಕ್ಕಿಸಿಕೊಳ್ಳುವಲ್ಲಿ ವಿಫಲನಾಗುತ್ತಾನೆ.

ಒಟ್ಟು ನವನಾಗರೀಕತೆಯ ಸ್ವಭಾವ ಹಳ್ಳಿಯ ಮಧುರ ಸಂಬಂಧಗಳನ್ನು ಕಲುಷಿತಗೊಳಿಸುವಲ್ಲಿ ಆಡಿದ ಪಾತ್ರದ ಚಿತ್ರಣವನ್ನು ಈ ಕೃತಿಗಳು ಬಿಂಬಿಸುತ್ತವೆ.

## ಕಥೆಗಳು

ಕವನವನ್ನು ಬಿಟ್ಟರೆ ಕಟ್ಟೀಮನಿಯವರು ಮೊದಲು ಬರೆದದ್ದು ಕಥೆಗಳನ್ನು. ಸಾಮಾಜಿಕ ಪ್ರಜ್ಞೆಯೊಂದಿಗೆ ಮೂಡಿಬಂದ ಕಟ್ಟೀಮನಿಯವರ ಬರಹ ಸಮಾಜದ ಏರುಪೇರಿನ ವಿವಿಧ ಮುಖಗಳನ್ನು ಚಿತ್ರಿಸುತ್ತದೆ. ಅವರ ಸಣ್ಣ ಕಥೆಗಳಲ್ಲಿ ಇದು ಸ್ಪಷ್ಟವಾಗಿದೆ. ಸ್ವಾತಂತ್ರ್ಯ ಹೋರಾಟದ, ಹೋರಾಟಗಾರರ ನೆಚ್ಚಿನ ಬಂಟರ ಭೀಕರ ಬರಗಾಲದಂತೆ ಜನರ ಬದುಕಿನ ದಾರುಣ ಸ್ಥಿತಿಗತಿಗಳನ್ನು ಕುರಿತ ವಸ್ತು ಇವರ ಕಥೆಗಳಲ್ಲಿವೆ.

ಒಟ್ಟು ಹತ್ತು ಕಥಾ ಸಂಕಲನವಿದ್ದರೂ ಬಹಳ ಚರ್ಚಿತವಾದ ಮತ್ತು ಕಟ್ಟೀಮನಿಯವರಿಗೆ ಹೆಸರು ತಂದುಕೊಟ್ಟ ಕಥೆಗಳೆಂದರೆ 'ಬರದ ದೇವಿ', 'ಕಾರವಾನ್', 'ಗಿರಿಜಾ ಕಂಡ ಸಿನೆಮಾ' ಮತ್ತು ಬಹುಭಾಷೆಯಲ್ಲಿ ಅನುವಾದಗೊಂಡ 'ನಾಯಕನ ಮಗ' ದಂಥ ಪ್ರಾತಿನಿಧಿಕ ರಚನೆಗಳು ಮಾತ್ರ. 'ಕಾರವಾನ್' ಮತ್ತು 'ಗಿರಿಜಾ ಕಂಡ ಸಿನೆಮಾ'ಗಳಂತೂ ಅತ್ಯುತ್ತಮ ಪ್ರಗತಿಶೀಲ ಕತೆಗಳು ಎಂದೆನಿಸಿವೆ.

ಒಟ್ಟು ಕಥೆಗಳ ಬಗ್ಗೆ ಮಾತಾಡುತ್ತ ಗಂಗಾಧರ ಮೊದಲಿಯಾರ್ ಅವರು 'ಆವೇಶ ಹಾಗೂ ಉದ್ವಿಗ್ನತೆಗೆ ಬರೆಹ ಸಿಕ್ಕಿಹಾಕಿಕೊಂಡಿರುವುದರಿಂದ ಕತೆಗಾರನ ಆಶಯ ವಾಚ್ಯವಾಗುವ ಸಂಭವ ಬಹಳವಿದೆ. ಕತೆಯ ಆಶಯ ಜನರಿಗೆ ಎಲ್ಲ ಅರ್ಥವಾಗುವುದಿಲ್ಲವಷ್ಟೇ ಎಂಬ ಭೀತಿಯಲ್ಲಿ ಕಟ್ಟೀಮನಿಯವರು ಧ್ವನಿಯನ್ನು ವಾಚ್ಯಗೊಳಿಸಿಬಿಡುವ ರೀತಿ ಕತೆಯ ಒಟ್ಟು ಬಂಧದ ದುರ್ಬಲ ಅಂಶವಾಗಿದೆ.

ಕತೆ ಅಥವಾ ಕಾದಂಬರಿಯಲ್ಲಿ ಕಾಣುವ ದುರ್ಬಲ ಅಂಶಗಳನ್ನು ಎತ್ತಿಹೇಳುವ ವಿಮರ್ಶನ ಬುದ್ಧಿಗಿಂತ ಸನ್ನಿವೇಶವನ್ನು ಅರ್ಥ ಮಾಡಿಕೊಂಡು ಕೃತಿಯ ಹಿನ್ನೆಲೆಯನ್ನು ಪರಿಭಾವಿಸಿಕೊಂಡು ಹೇಳುವ ಮಾತು ಸಮರ್ಥ ವಿಮರ್ಶೆಯಾದೀತು. ಇದು ಕೇವಲ 'ಏನೋ ಹೇಳಲೇಬೇಕೆಂಬ ಕಾರಣಕ್ಕಾಗಿ ಹೇಳಿದ ಮಾತು ಎನ್ನುವಂತಾಗುತ್ತದೆ.

ಕಟ್ಟೀಮನಿಯವರ ಪ್ರಾಮಾಣಿಕತೆವನ್ನು ಸಂಪೂರ್ಣವಾಗಿ ಗ್ರಹಿಸಿಕೊಂಡವರು ಯಾರೂ ಈ ಮಾತು ಹೇಳಲಾರರು. ಕಟ್ಟೀಮನಿಯವರು ತಮ್ಮ ಆತ್ಮ ಚರಿತ್ರೆಯಲ್ಲಿ

ಈ ಬಗ್ಗೆ ಹೇಳಿಕೊಳ್ಳುತ್ತಾರೆ. "ನನ್ನ ಕಥೆಗಳು ಬಹಳಷ್ಟು ಅಪಕ್ವವಾದವು... ನನ್ನ ಸಾಹಿತ್ಯ ಅಮರವಾಗದಿದ್ದರೂ ಸರಿಯೆ ಬಾಳಿನ ಹೋರಾಟದಲ್ಲಿ ಕಾದು ಸೋತುಹೋಗಲಿರುವ ಬಡ ಬಾಂಧವರಿಗೆ ಅದು ಪ್ರಚೋದನೆ ಮಾಡಿದರೆ ಸಾಕು" ಎಂಬ ಮಾತು ಎಂತಹ ಸತ್ಯವನ್ನು ಹೇಳುತ್ತದೆಂಬುದು ಮನಗಾಣಬೇಕು. ಕಟ್ಟೀಮನಿ ಒರಟು, ಹುಂಬ, ಎನ್ನುವ ವಿಮರ್ಶಕರಿಗೆ ಮೇಲಿನ ಮಾತು ತುಂಬಾ ಸೂಕ್ತ ಮತ್ತು ಸೂಕ್ಷ್ಮ ಉತ್ತರ. ಹಾಗಂತ ದೋಷಗಳೇ ಇಲ್ಲವೆನ್ನುವುದು ಪೂರ್ವಗ್ರಹಿತ ಮಾತಾದೀತು. ಅವುಗಳನ್ನು ಮೀರಿ ಕೃತಿಯನ್ನು ನೋಡಹೊರಟರೆ ಮಾತ್ರ ಕಟ್ಟೀಮನಿ ಅರ್ಥವಾಗುತ್ತಾರೆ.

ಜೆ.ಹೆಚ್. ಲಕ್ಕಪ್ಪಗೌಡರು ಹೇಳುವ ಮಾತು ಈ ನಿಟ್ಟಿನಲ್ಲಿ ಅತ್ಯಂತ ಪೂರಕವೆನಿಸುತ್ತದೆ :

> "ಧರ್ಮದ ಹೆಸರಿನಲ್ಲಿ ಅಧರ್ಮ, ಸಂಸ್ಕೃತಿಯ ಹೆಸರಿನಲ್ಲಿ ಬರ್ಬರತೆ, ನಿಯಮ ನೀತಿಗಳ ಹೆಸರಲ್ಲಿ ನಿರಂಕುಶ ದರ್ಪ ದಬ್ಬಾಳಿಕೆ, ಉದ್ಧಾರದ ಹೆಸರಿನಲ್ಲಿ ಅಧಃಪತನ, ಸಮಾನತೆಯ ಹೆಸರಿನಲ್ಲಿ ವಿಷಮತೆ, ಸ್ವಾತಂತ್ರ್ಯದ ಹೆಸರಿನಲ್ಲಿ ಪಾರತಂತ್ರ್ಯ ನಮ್ಮ ಸುತ್ತಮುತ್ತ ವಿಜೃಂಭಿಸುತ್ತಿವೆ.... ಒಂದು ಕಡೆ ಭೋಗ ವೈಭೋಗಗಳ ವಿಕಟಾಟ್ಟ ಹಾಸ ಮತ್ತೊಂದು ಕಡೆ ಉಪವಾಸ ವನವಾಸ ರೋಗ ರುಜಿನಗಳ ಆರ್ತರವ. ಇದು ನಿಸರ್ಗದ ನಿಯಮದ ಪ್ರಭಾವವಲ್ಲ. ಮಾನವ ಮೃಗ ಪ್ರಭುತ್ವದ ಪ್ರಭಾವ. ಎಲ್ಲೆಲ್ಲೂ ಒಳಿತಿಗೇ ಕಾಣಬಯಸುವ, ಆದರ್ಶವಾದಿಯಾದ, ಸಮಾನತೆಯ ಪ್ರತಿಪಾದಕನಾದ ಲೇಖಕ ಈ ಢಂಭಾಚಾರ, ಈ ಶೋಷಣೆ, ಈ ಸೋಗಲಾಡಿತನ, ಈ ವಂಚನೆ, ಈ ಜಾತಿಮತ್ಸರ, ಈ ಹುಳುಕು ನಾರುವ ಅಂತರಂಗ, ಈ ದರ್ಪಗಳನ್ನು ಕಂಡು ಅಸ್ವಸ್ಥ ಮನಸ್ಕನಾಗಿ ರೊಚ್ಚಿಗೇಳುವುದು ಸಹಜ. ತನ್ನ ಬರವಣಿಗೆಯ ಮೂಲಕವಾದರೂ ಸಮಾಜ ಶರೀರದ ಈ ರೋಗಗಳನ್ನು ಖಂಡಿಸಿ ಅವುಗಳ ಅನಾಚಾರವನ್ನು ಬಯಲಿಗೆಳೆದು ನಿರ್ಲಕ್ಷ್ಯಕ್ಕೀಡಾದ ದಲಿತ ವರ್ಗದ ಉದ್ಧಾರಕ್ಕೆ ಶ್ರಮಿಸುವುದು ತನ್ನ ಧ್ಯೇಯವೆಂದು ಬಗೆದ ಲೇಖಕ ಎಲ್ಲೆಲ್ಲೂ ಸೌಂದರ್ಯವನ್ನೇ ಸಂಸ್ಕೃತಿಯನ್ನೇ ಕೋಮಲತೆಯನ್ನೇ ಕಾಣುವ ಸಮಸ್ಯೆ ಇದ್ದರೂ ಸರಳಗೊಳಿಸಿ ನಯವಾಗಿ ನವುರಾಗಿ ಚಿತ್ರಿಸುವ ಸಂಪ್ರದಾಯ ಅವನಿಗೆ ಸರಿದೋರಲಿಲ್ಲ. ಹೀಗೆ ತೀವ್ರ ಪ್ರತಿಕ್ರಿಯಾಶೀಲನಾಗಿ ಲೋಕ ಸುಧಾರಣಾ ಮನೋಭಾವದಿಂದ ಸುಡದ ಕೆಂಡದ ಕಾವಿನಿಂದ ಮೂಡಿದುದೇ ಪ್ರಗತಿಶೀಲ ಸಾಹಿತ್ಯ. ಈ ಬಗೆಯ ಉದ್ದೇಶದಿಂದ ಕನ್ನಡ ಸಣ್ಣಕತೆಗೆ ಹೊಸ ಪ್ರಾಣ ಹೊಸ ತ್ರಾಣ ಹೊಸ ಮುಖ ಪ್ರಾಪ್ತವಾಯಿತು. ಈ ಪಂಥದ ಪ್ರಮುಖ ಲೇಖಕರಲ್ಲಿ ಕಟ್ಟೀಮನಿಯವರೂ ಒಬ್ಬರು. ಅವರ ಮನೋಧರ್ಮವೇ ಕ್ರಾಂತಿಕಾರಕವಾದುದು, ಅನ್ಯಾಯ

ಅನಾಚಾರಗಳನ್ನು ಕಂಡು ಸಿಡಿದೇಳುವ ಸೌಮ್ಯರೂಪದ ಸಿಡಿಗುಂಡು" (ಕಟ್ಟೀಮನಿ ಬದುಕು ಬರಹ ೧೯೬೯: ೯೨೦).

ಮೇಲಿನ ಮಾತಿನ ಒಟ್ಟು ಧೋರಣೆ ಕಟ್ಟೀಮನಿಯವರ ಸ್ವಭಾವ, ಬರವಣಿಗೆಗೆ ಹಿಡಿದ ಕನ್ನಡಿಯಾಗಿದೆ.

ಒಟ್ಟು ಕಟ್ಟೀಮನಿಯವರ ಕಥೆಗಳ ಹಿಂದಿನ ಮೂಲಸೆಲೆ ಪ್ರಗತಿಯ ಉತ್ಕಟೇಚ್ಛೆ. ಹೀಗಾಗಿ ಕೆಲವೊಂದು ಕಥೆಗಳಲ್ಲಿ ಅಲ್ಲಲ್ಲಿ ಆವೇಶ, ಉದ್ವಿಗ್ನತೆ, ಅತಿವಾಚ್ಯತೆ, ಭಾಷೆಯ ಒಲ್ಲದ ತುರುಕುವಿಕೆ ಕಂಡು ಬರುತ್ತದೆ. ಅನುಭವದ ನೇರ ಅಳವಡಿಕೆ ಪುನರಾವೃತ್ತಿಗೆ ದಾರಿಯಾಗಿದೆ. ಪತಿ ಪತ್ನಿಯರ ಸೂಕ್ಷ್ಮಸಂಬಂಧಗಳನ್ನು ರಾಗಾನುಭವಗಳನ್ನು ಚಿತ್ರಿಸುವಾಗ ಏಕತಾನತೆ ಕಥೆಗಳಲ್ಲಿ ನೆಲೆಗೊಂಡಿದೆ.

ಈ ಹಿನ್ನೆಲೆಯಲ್ಲಿ ಅವರನ್ನು ಸಮರ್ಥ ಕಥೆಗಾರರಲ್ಲ ಎಂದು ತೀರ್ಪುಕೊಡುವುದು ಸೂಕ್ಷ್ಮಾತಿಸೂಕ್ಷ್ಮಗಳ ಅಳವಡಿಕೆ, ಕಲಾಪ್ರಜ್ಞೆಯ ಕೊರತೆ ಇಲ್ಲವೆನ್ನುವುದು ಸಾಧು ಎನಿಸದು.

ನಿಜಾನುಭವಗಳನ್ನು ಅವು ಇದ್ದಂತೆ ಇನ್ನೊಬ್ಬರಿಗೆ ತಿಳಿಸುವುದು ಅವರ ಮನೋಭಿಲಾಷೆಯಾಗಿತ್ತು. ಸಾಹಿತ್ಯ ಕೇವಲ ಸಾಹಿತ್ಯವಾಗದೆ ಅದು ಜನತೆಗೆ ಮುಟ್ಟಬೇಕು ಅದು ಯಾವ ಧಾಟಿಯಲ್ಲಿದ್ದರೂ ಅಷ್ಟೆ. ಕಲಾತ್ಮಕತೆ ಬೆನ್ನುಹತ್ತಿ ಇರುವುದನ್ನು ವಿರೂಪಗೊಳಿಸಿ ಹೇಳುವುದು ಅವರಿಗೆ ಸೇರುತ್ತಿರಲಿಲ್ಲ. ಹೆಸರು, ಪ್ರಶಸ್ತಿ ಅವರ ಬರವಣಿಗೆಯ ಧೋರಣೆಯಾಗಿರಲಿಲ್ಲ. ಈ ಕಾರಣಕ್ಕಾಗಿ ಅವರ ಕಥೆಗಳಲ್ಲಿ ಅಷ್ಟೇಕೆ, ಒಟ್ಟು ಬರವಣಿಗೆ ಎಂದರೂ ಸರಿ ಹೊಂದೀತು ಘಟನೆಗಳ ಇಡಿಕಿರಿಯುವಿಕೆ, ಭಾವನೆಗಳ ಮುದ್ದೆಯನ್ನು ಕಾಣುತ್ತೇವೆ. ಇಲ್ಲಿ ಕಥೆ ಹೀಗೆ ಚಿತ್ರಿತವಾಗಿದೆ ಎನ್ನುವುದಕ್ಕಿಂತ ಅದು ಏನನ್ನು ಹೇಳುತ್ತದೆ ಎನ್ನುವುದು ಮುಖ್ಯ. ಕಟ್ಟೀಮನಿಯವರ ಈ ಥರದ ನಿರಾಭರಣ, ಸರಳ ಸುಂದರ ಬರವಣಿಗೆ ಸಾಮೂಹಿಕ ಬದುಕಿನ ಸಹಜ ಲಯಗಳನ್ನು ಒಳಗೊಳ್ಳುವುದರೊಟ್ಟಿಗೆ ಅವುಗಳ ಸುಪ್ತತನದ ಅದ್ಭುತಗಳನ್ನು ಮೆರೆಸುತ್ತದೆ.



# ಅನುಬಂಧ - ೧

## ಬಸವರಾಜ ಕಟ್ಟೀಮನಿಯವರ ಬದುಕಿನ ಮಹತ್ವದ ಘಟನೆಗಳು

೫-೧೧-೧೯೧೯ - ಗೋಕಾಕದಲ್ಲಿ ಜನನ.

೧೯೩೩ - ಕಥೆಬರೆಯಲು ಆರಂಭ, ಮೊದಲ ಕಥೆ, ಹಳ್ಳಿಯ ಹುಡುಗಿ.

೧೯೩೭ - ಹೈಸ್ಕೂಲ ಶಿಕ್ಷಣಕ್ಕೆ ವಿದಾಯ, 'ಸಂಯುಕ್ತ ಕರ್ನಾಟಕ'ದಲ್ಲಿ ಕೆಲಸ.

೧೯೩೮ - 'ತರುಣ ಕರ್ನಾಟಕ' ದಿನಪತ್ರಿಕೆಯಲ್ಲಿ ಉಪ ಸಂಪಾದಕ - ಬೆಂಗಳೂರಿನ ಸ್ವತಂತ್ರ ಮಾಸ ಪತ್ರಿಕೆಯಲ್ಲಿ ಕೆಲಸ.

೧೯೩೯ - ಹುಬ್ಬಳ್ಳಿ 'ಲೋಕಮಾತ'ದಲ್ಲಿ ಕೆಲಸ.

೧೯೪೧ - ಬೆಂಗಳೂರಿಗೆ ಪಯಣ, ಸ್ವತಂತ್ರ ಕರ್ನಾಟಕದಲ್ಲಿ ೩ ತಿಂಗಳು ಕೆಲಸ, ಅಲ್ಲಿಂದ ಗದಗಿನ ಕರ್ನಾಟಕ ಬಂಧುವಿಗೆ ಪಯಣ.

೧೯೪೨ - ಬೆಂಗಳೂರು 'ವಾಣಿ' ಪತ್ರಿಕೆಯಲ್ಲಿ ಒಂದು ತಿಂಗಳು ಕಾಲ ಆಗಸ್ಟ್ ಚಳುವಳಿಯ ಸೇರ್ಪಡೆ, ಸೆರೆಮನೆಗೆ ಬರದದೇವಿಗಳಂತಹ ಕಥೆಗಳ ರಚನೆ.

೧೯೪೩ - ಬೆಂಗಳೂರಿಗೆ 'ಉಷಾ' ಪತ್ರಿಕೆ ಆರಂಭ, ಕುವೆಂಪು ಅವರ ಪ್ರಥಮ ಭೇಟಿ.

೧೯೪೪ - ಮದುವೆ, 'ಕಾರವಾನ್' ಪ್ರಥಮ ಕಥಾ ಸಂಕಲನದ ಪ್ರಕಟಣೆ.

೧೯೪೬ - 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯ ಪ್ರಕಟಣೆ, ಇದು ಇವರ ಪ್ರಥಮ ಕಾದಂಬರಿ, 'ಸ್ವತಂತ್ರ ಪತ್ರಿಕೆಯ ಆರಂಭ'.

೧೯೪೮ - ದಾವಣಗೆರೆ 'ಸ್ವತಂತ್ರ' ಲಿಮಿಟೆಡ್.

೧೯೪೯ - ‘ಮಾಡಿ ಮಡಿದವರು’ ಕಾದಂಬರಿ ರಚನೆ.

೧೯೫೧ - ‘ಮಾಡಿ ಮಡಿದವರು’ ಪ್ರಕಟಣೆ, ಮಲಾಮರಡಿಗೆ ಪಯಣ ‘ಜ್ವಾಲಾಮುಖಿಯ ಮೇಲೆ’ ಕಾದಂಬರಿ ರಚನೆ.

೧೯೫೧ - ‘ಮೋಹದ ಬಲೆಯಲ್ಲಿ’ ರಚನೆ, ‘ಜ್ವಾಲಾಮುಖಿ’ಯ ಮೇಲೆ ಪ್ರಕಟಣೆ.

೧೯೫೨ - ‘ಜರತಾರಿ ಜಗದ್ಗುರು’ ರಚನೆ.

೧೯೬೮ - ಗ್ರಾಮ ಸುಧಾರಣೆ ಸಂಘಟನೆ - ಕಥೆ ಕಾದಂಬರಿ ರಚನೆ.

೧೯೬೫ - ಮಕ್ಕಳ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಪಯಣ.

೧೯೬೬ - ಕಾದಂಬರಿ ನಿಲಯ ಕಟ್ಟಿಸಿದ್ದು.

೧೯೬೮ - ವಿಧಾನ ಪರಿಷತ್ತಿಗೆ ನಾಮಕರಣ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

೧೯೬೮ - ನವೆಂಬರ್ ೧೫ ‘ಸೋವಿಯತ್ ದೇಶ’ ನೆಹರೂ ಪ್ರಶಸ್ತಿ.

೧೯೬೯ - ರಶಿಯಾ ಪ್ರವಾಸ ಮತ್ತು ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

೧೯೬೯ - ‘ಕಟ್ಟೀಮನಿ ಬದುಕು ಬರಹ’ ಬಸವರಾಜ ಕಟ್ಟೀಮನಿಯವರಿಗೆ ೫೦ ತುಂಬಿದಾಗ ಅರ್ಪಿಸಿದ ಅಭಿನಂದನ ಗ್ರಂಥ.

೧೯೮೦ - ಬೆಳಗಾವಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

೧೯೮೨ - ದಾವಣಗೆರೆಯ ಬಸವರಾಜ ಕಟ್ಟೀಮನಿ ಸಾಹಿತ್ಯ ಪ್ರೇಮಿಗಳಿಂದ ಸನ್ಮಾನ ಪತ್ರ.

೧೯೮೨ - ‘ಬಸವರಾಜ ಕಟ್ಟೀಮನಿ ಜೀವನ ಸಾಹಿತ್ಯ’ ಬೆಳಗಾವಿಯ ಬಸವರಾಜ ಕಟ್ಟೀಮನಿ ಸಾಹಿತ್ಯಾಭಿಮಾನಿಗಳು ಅರ್ಪಿಸಿದ ಅಭಿನಂದನ ಗ್ರಂಥ.

೧೯೮೬ - ಶ್ರೀ ಬಸವರಾಜ ಸಾದರ ಅವರು ‘ಕಟ್ಟೀಮನಿಯವರ ಕಾದಂಬರಿ: ಒಂದು ಅಧ್ಯಯನ’ ಎಂಬ ಪಿಎಚ್.ಡಿ ಮಹಾ ಪ್ರಬಂಧವನ್ನು ಬರೆದು ಸಲ್ಲಿಸಿದ್ದು.

❑

## ಅನುಬಂಧ - ೨

### ಕಟ್ಟೀಮನಿಯವರ ಸಾಹಿತ್ಯ

೧.೧ **ಕಾದಂಬರಿಗಳು**

೧. ಸ್ವಾತಂತ್ರ್ಯದೆಡೆಗೆ (೧೯೪೪)

೨. ಮಾಡಿ ಮಡಿದವರು (೧೯೫೦)

೩. ಜ್ವಾಲಾಮುಖಿಯ ಮೇಲೆ (೧೯೫೧)

೪. ಮೋಹದ ಬಲೆಯಲ್ಲಿ (೧೯೫೧)

೫. ಬಲೆಯ ಬೀಸಿದರು (೧೯೫೪)

೬. ಖಾನಾವಳಿಯ ನೀಲಾ (೧೯೬೨)

೭. ಬೀದಿಯಲ್ಲಿ ಬಿದ್ದವಳು (೧೯೫೪)

೮. ಜರತಾರಿ ಜಗದ್ಗುರು (೧೯೫೨)

೯. ಮಣ್ಣು ಮತ್ತು ಹೆಣ್ಣು (೧೯೬೨)

೧೦. ನೀ ನನ್ನ ಮುಟ್ಟಬೇಡ (೧೯೫೪)

೧೧. ಆಶ್ರಮವಾಸಿ (೧೯೮೭, ಮೂರನೆ ಮುದ್ರಣ)

೧೨. ಜನಿವಾರ ಮತ್ತು ಶಿವದಾರ (೧೯೮೦)

೧೩. ಗಿರಿಯ ನವಿಲು (೧೯೮೭)

೧೪. ಜಲತರಂಗ (೧೯೫೭)

೧೫. ನಾನು ಪೋಲೀಸನಾಗಿದ್ದೆ (೧೯೫೪)

೧೬. ಬಂಗಾರದ ಜಿಂಕೆಯ ಹಿಂದೆ (೧೯೮೭, ಮೂರನೆ ಮುದ್ರಣ)

೧೭. ಪೌರುಷ ಪರೀಕ್ಷೆ (೧೯೫೮)

೧೮. ಕತ್ತರಿ ಪ್ರಯೋಗ (೧೯೫೮)

೧೯. ಬೆಳಗಿನ ಗಾಳಿ (೧೯೫೬)

೨೦. ನರಗುಂದ ಬಂಡಾಯ (೧೯೭೩)

೨೧. ಸಾಕ್ಷಾತ್ಕಾರ (೧೯೫೬)

೨೨. ಪಾತರಗಿತ್ತಿ (೧೯೮೭, ಮೂರನೆ ಮುದ್ರಣ)

೨೩. ಚಕ್ರವ್ಯೂಹ (೧೯೮೨,ಎರಡನೆ ಮುದ್ರಣ)

೨೪. ದ್ರೋಹಿ (೧೯೬೧)

೨೫. ಗೆಳೆಯನ ಮಡದಿ (೧೯೫೯)

೨೬. ಪ್ರಿಯ ಬಾಂಧವಿ (೧೯೭೭)

೨೭. ಐದನೆಯ ದೇಸಾಯಿಣಿ (೧೯೮೭)

೨೮. ಗ್ರಾಮಸೇವಿಕಾ (೧೯೮೭, ಮರು ಮುದ್ರಣ)

೨೯. ಸಂಗೊಳ್ಳಿ ರಾಯನಾಯಕ (೧೯೭೩)

೩೦. ಬೆಂಗಳೂರಿಗೊಂದು ಟಿಕೇಟು (೧೯೭೫)

೩೧. ಗೋವಾದೇವಿ (೧೯೫೫)

೩೨. ಹೆಂಡತಿ (೧೯೬೯)

೩೩. ಪ್ರಪಾತ (೧೯೮೭, ಮೂರನೆ ಮುದ್ರಣ)

೩೪. ಮಾಜಿ ಮಂತ್ರಿ (೧೯೭೫)

೩೫. ಹರಿಜನಾಯಣ (೧೯೬೯)

೩೬. ತಿರುಗಣಿ (೧೯೮೪)

೩೭. ಸೈತಾನ (೧೯೮೫)

೩೮. ಜೊತೆಗಾತಿ (೧೯೮೫)

೩೯. ಮಗನ ತಾಯಿ (೧೯೮೫-೧೯೮೬)

೪೦. ಆಧುನಿಕ ಬಸವಣ್ಣ (೧೯೮೬)

**೧. ೨ ಕಥಾ ಸಂಕಲನಗಳು**

೧. ಕಾರವಾನ್ (೧೯೬೩)

೨. ಸೆರೆಯಿಂದ ಹೊರಗೆ ಮತ್ತು ಇತರ ಕಥೆಗಳು (೧೯೪೯)

೩. ಆಗಸ್ಟ್ ಒಂಭತ್ತು (೧೯೫೬)

೪. ಗುಲಾಬಿ ಹೂ (೧೯೪೬)

೫. ಜೋಳದ ಬೆಳೆಯ ನಡುವೆ (೧೯೫೩)

೬. ಜೀವನ ಕಲೆ (೧೯೮೨)

೭. ಸುಂಟರಗಾಳಿ (೧೮೫೭)

೮. ಸೈನಿಕನ ಹೆಂಡತಿ (೧೯೬೬)

೯. ಹುಲಿಯಣ್ಣನ ಮಗಳು ಮತ್ತು ಇತರ ಕಥೆಗಳು (೧೯೬೪)

೧೦. ಗರಡಿಯಾಳು (೧೯೭೫)

**೧. ೩ ನಾಟಕ**

೧. ಪಟ್ಟಣದ ಹುಡುಗಿ (೧೯೫೬)

**೧. ೪ ಕವನ ಸಂಕಲನ**

೧. ಕಂಪೋಜಿಟರ್ (೧೯೭೬)

೨. ಸ್ವತಂತ್ರವ್ವ- (೧೯೭೭)

**೧. ೫ ಪ್ರವಾಸ ಕಥನ**

೧. ನಾಕಂಡ ರಶಿಯಾ (೧೯೭೨)

**೧. ೬ ಮಕ್ಕಳ ಕಥೆ**

೧. ಸಂಗೊಳ್ಳಿ ರಾಯಣ್ಣ (೧೯೭೩)

೨. ಕುಮಾರರಾಮ (೧೯೭೫)

**೧. ೭ ಆತ್ಮಕಥೆ**

೧. ಕಾದಂಬರಿಕಾರನ ಕಥೆ (೧೯೮೧)

**೧. ೮ ಜೀವನ ಚರಿತ್ರೆ**

೧. ಸೇನಾಪತಿ ಚನ್ನಪ್ಪವಾಲಿ (೧೯೫೦)

೨. ಪ್ರಿಯದರ್ಶಿನಿ, ಮಾರ್ಗದರ್ಶಿನಿ: ಇಂದಿರಾಗಾಂಧಿ (೧೯೭೫)

**೧. ೯ ಸಂಪಾದಿತ ಕೃತಿಗಳು**

೧. ನವಿಲೂರು ಮನೆಯಿಂದ (೧೯೫೨)

೨. ರಸಿಕರಂಗ ದರ್ಶನ (೧೯೬೬)

೩. ಹಾಲು ತೊರೆಗೆ ಬೆಲ್ಲದ ಕೆಸರು (೧೯೮೩)

**೧. ೧೦ ಅನುವಾದ**

೧. ಕಾಡಿನ ಹಾಡು (೧೯೭೭)



## ಅನುಬಂಧ - ೩

### ಹೆಚ್ಚಿನ ಓದಿಗಾಗಿ

೧. ಅನಕೃ ೧೯೪೬; 'ಕನ್ನಡದ ದಾರಿ', ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು.

೨. ಕರ್ನಾಟಕ ಪ್ರಗತಿ ಪಂಥ ಯೋಜನಾ ಸಮಿತಿ, ೧೯೭೮ 'ಪ್ರಗತಿ ಪಂಥ' (ದಾವಣಗೆರೆಯಲ್ಲಿ ನಡೆದ ಪ್ರಗತಿ ಪಂಥದ ಪ್ರಥಮ ಸಮ್ಮೇಳನದ ಭಾಷಣಗಳ ಸಂಗ್ರಹ) ಬೆಂಗಳೂರು ಕರ್ನಾಟಕ ಪ್ರಗತಿ ಪಂಥ ಸಂಯೋಜನಾ ಸಮಿತಿ, ಬೆಂಗಳೂರು.

೩. ಗಿರಡ್ಡಿ ಗೋವಿಂದರಾಜ, ೧೯೭೬: 'ಕಾದಂಬರಿ ವಸ್ತು ಮತ್ತು ತಂತ್ರ' ಬೆಂಗಳೂರು ಬಾಪ್ಕೋ; (ದ್ವಿತೀಯ ಮುದ್ರಣ: ಸ್ನೇಹಾ ಪ್ರಕಾಶನ, ಬೆಂಗಳೂರು)

೪. ಚಂದ್ರಶೇಖರ ಪಾಟೀಲ (ಸಂ) ೧೯೯೩. 'ಸಂಕ್ರಮಣ ಸಾಹಿತ್ಯ ಸಂಪುಟ ೨೧ ಸಂಕ್ರಮಣ ಪ್ರಕಾಶನ, ಧಾರವಾಡ.

೫. ಚೆನ್ನವೀರ ಕಣವಿ ೧೯೬೬, 'ಸಾಹಿತ್ಯ ಚಿಂತನ'

೬. ದೇಜಗೌ ಮತ್ತು ಸಿಪಿಕೆ (ಸಂ) ೧೯೬೯: 'ಕಟ್ಟೀಮನಿ ಬದುಕು ಬರಹ' (ಅಭಿನಂದನಾ ಗ್ರಂಥ) ಗೀತಾ ಬುಕ್ ಹೌಸ್, ಮೈಸೂರು.

೭. ನಿರಂಜನ ೧೯೮೪; 'ಬುದ್ಧಿ ಭಾವ ಬದುಕು' ಸ್ಪಂದನ, ಬೆಂಗಳೂರು.

೮. ಶ್ರೀ ಬಸವರಾಜ ಸಾದರ ೧೯೮೬: 'ಬಸವರಾಜ ಕಟ್ಟೀಮನಿ ಕಾದಂಬರಿಗಳು: ಒಂದು ಅಧ್ಯಯನ' (ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ ಮಹಾ ಪ್ರಬಂಧ - ಅಪ್ರಕಟಿತ) ಧಾರವಾಡ.

೧೦. ಬಸವರಾಜ ಕಟ್ಟೀಮನಿ, ೧೯೮೧: 'ಕಾದಂಬರಿಕಾರನ ಕಥೆ' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧. ಬಸವರಾಜ ಕಟ್ಟೀಮನಿ ೧೯೭೭, ಬಸವರಾಜ ಕಟ್ಟೀಮನಿ ಅವರ ಆತ್ಮಕಥೆ - ಸಾಹಿತ್ಯ ಶ್ರೀ, ಪ್ರ: ನವೋದಯನಗರ, ಧಾರವಾಡ.

೧೨. ಜಿ.ಎಸ್. ಶಿವರುದ್ರಪ್ಪ (ಪ್ರ.ಸಂ) 'ಬಸವರಾಜ ಕಟ್ಟೀಮನಿಯವರ ಸಾಹಿತ್ಯ' ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೩. ಭಂಡಾರಿ ಆರ್.ವಿ. ೧೯೯೩: 'ಬಸವರಾಜ ಕಟ್ಟೀಮನಿ, ತರಾಸು, ನಿರಂಜನರ ಕಾದಂಬರಿಗಳಲ್ಲಿ ವರ್ಣ ಮತ್ತು ವರ್ಗ ಸಂಘರ್ಷದ ಸ್ವರೂಪ' (ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿ.ಎಚ್.ಡಿ ಮಹಾ ಪ್ರಬಂಧ - ಅಪ್ರಕಟಿತ) ಮಂಗಳ ಗಂಗೋತ್ರಿ, ಮಂಗಳೂರು.

೧೪. ರಾಘವೇಂದ್ರರಾವ್ ಹೆಚ್.ಎಸ್ ೧೯೯೦: 'ಪ್ರಗತಿಶೀಲತೆ' ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫. ಸಿದ್ದಣ್ಣ ಮಸಳಿ, ಅಪ್ಪಣ್ಣ ಮಟ್ಟಿಕಲ್ಲಿ, ೧೯೮೨: 'ಬಸವರಾಜ ಕಟ್ಟೀಮನಿ ಜೀವನ ಸಾಹಿತ್ಯ' ಅರುಣ ಪ್ರಕಾಶನ, ಧಾರವಾಡ.



ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಚಂದ್ರಶೇಖರ ಕಂಬಾರ
ಕುಲಪತಿಗಳು